

ಕನ್ನಡ ವಿಶ್ವವಿದ್ಯಾಲಯ, ಹಂಪಿ

# " ಚಕೋರಿ ಮತ್ತು ಶಿಖರಸೂರ್ಯದ ವಿಭಿನ್ನ ನೆಲೆಗಳು "

ಕನ್ನಡ ಎಂ.ಫಿಲ್ ಪದವಿಗಾಗಿ ಕಾವ್ಯಮಂಡಲದ ವತಿಯಿಂದ
ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಅರ್ಪಿಸಿದ ನಿಬಂಧ


ಮಾರ್ಗದರ್ಶಕರು
ಡಾ. ಬಸವರಾಜ ಸಿ. ಕಲ್ಗುಡಿ
ಪ್ರಾಧ್ಯಾಪಕರು
ಕನ್ನಡ ಅಧ್ಯಯನ ಕೇಂದ್ರ,
ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು

ಸಂಶೋಧನಾ ವಿದ್ಯಾರ್ಥಿ
ಕೃಷ್ಣಮೂರ್ತಿ ಎನ್.ಪಿ.





ಕಾವ್ಯಮಂಡಲ
೧೩/೮೫, ರಾಷ್ಟ್ರೀಯ ವಿದ್ಯಾಲಯ ರಸ್ತೆ
ಬಸವನಗುಡಿ, ಬೆಂಗಳೂರು-೦೪.

2008



ಕನ್ನಡ ವಿಶ್ವವಿದ್ಯಾಲಯ, ಹಂಪಿ

# " ಚಕೋರಿ ಮತ್ತು ಶಿಖರಸೂರ್ಯದ ವಿಭಿನ್ನ ನೆಲೆಗಳು "

ಕನ್ನಡ ಎಂ. ಫಿಲ್ ಪದವಿಗಾಗಿ ಕಾವ್ಯಮಂಡಲದ ವತಿಯಿಂದ
ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಅರ್ಪಿಸಿದ ನಿಬಂಧ

ಮಾರ್ಗದರ್ಶಕರು
ಡಾ. ಬಸವರಾಜ ಸಿ. ಕಲ್ಗುಡಿ
ಪ್ರಾಧ್ಯಾಪಕರು
ಕನ್ನಡ ಅಧ್ಯಯನ ಕೇಂದ್ರ,
ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು






ಸಂಶೋಧನಾ ವಿದ್ಯಾರ್ಥಿ
ಕೃಷ್ಣಮೂರ್ತಿ ಎನ್. ಪಿ.

ಕಾವ್ಯಮಂಡಲ
೧೩/೮೫, ರಾಷ್ಟ್ರೀಯ ವಿದ್ಯಾಲಯ ರಸ್ತೆ
ಬಸವನಗುಡಿ, ಬೆಂಗಳೂರು-೦೪.

2008

# ದೃಢೀಕರಣ ಪತ್ರ

ಕೃಷ್ಣಮೂರ್ತಿ ಎನ್.ಪಿ. ರವರು ಎಂ.ಫಿಲ್ ಪದವಿಗಾಗಿ ಬರೆದು ಸಿದ್ಧಪಡಿಸಿರುವ ''ಚಕೋರಿ ಮತ್ತು ಶಿಖರಸೂರ್ಯದ ವಿಭಿನ್ನ ನೆಲೆಗಳು'' ಎಂಬ ನಿಬಂಧವನ್ನು ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಕಾವ್ಯಮಂಡಲದ ವತಿಯಿಂದ ಸಲ್ಲಿಸಲು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಲಾಗಿದೆ. ಈ ನಿಬಂಧದ ವಿಷಯವನ್ನು ಅಥವಾ ಇದರ ಯಾವುದೇ ಭಾಗವನ್ನು ಇದಕ್ಕೆ ಮೊದಲು ಬೇರೆ ಯಾವುದೇ ಪದವೀಗಾಗಲೀ ಅಥವಾ ಇನ್ನಿತರ ಉದ್ದೇಶಗಳಿಗಾಗಲೀ ಸಲ್ಲಿಸಿಲ್ಲವೆಂದು ಈ ಮೂಲಕ ದೃಢೀಕರಿಸುತ್ತೇನೆ.

ಮಾರ್ಗದರ್ಶಕರು
ಡಾ. ಬಸವರಾಜ ಸಿ. ಕಲ್ಗುಡಿ
ಪ್ರಾಧ್ಯಾಪಕರು
ಕನ್ನಡ ಅಧ್ಯಯನ ಕೇಂದ್ರ
ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು

ಸ್ಥಳ : ಬೆಂಗಳೂರು
ದಿನಾಂಕ : 30.9.2008

ಪ್ರಾಧ್ಯಾಪಕರು
ಕನ್ನಡ ಅಧ್ಯಯನ ಕೇಂದ್ರ
ಜ್ಞಾನಭಾರತಿ
ಬೆಂಗಳೂರು ವಿಶ್ವವಿದ್ಯಾನಿಲಯ
ಬೆಂಗಳೂರು-560 056

# ಪ್ರಮಾಣ ಪತ್ರ

''ಚಕೋರಿ ಮತ್ತು ಶಿಖರಸೂರ್ಯದ ವಿಭಿನ್ನ ನೆಲೆಗಳು'' ಎಂಬ ನಿಬಂಧವನ್ನು ಎಂ.ಫಿಲ್ ಪದವಿಗಾಗಿ ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಕಾವ್ಯಮಂಡಲದ ವತಿಯಿಂದ ಸಲ್ಲಿಸಲು ಡಾ. ಬಸವರಾಜ ಸಿ. ಕಲ್ಲುಗುಡಿ ರವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಲಾಗಿದೆ. ಈ ನಿಬಂಧದ ವಿಷಯವಾಗಿ ಇದುವರೆವಿಗೂ ಬೇರೆ ಯಾವುದೇ ಪದವಿಗಾಗಲಿ ಅಥವಾ ಇನ್ನಿತರ ಉದ್ದೇಶಗಳಿಗಾಗಲಿ ಬಳಸಿಕೊಂಡಿಲ್ಲವೆಂದು ಘೋಷಿಸುತ್ತೇನೆ.

ಸ್ಥಳ : ಬೆಂಗಳೂರು
ದಿನಾಂಕ : 30-9.2008.

ಕೃಷ್ಣಮೂರ್ತಿ.ಎನ್.ಪಿ.
ಸಂಶೋಧನಾ ವಿದ್ಯಾರ್ಥಿ

# ಪರಿವಿಡಿ

# ಅಧ್ಯಾಯ – 1

## ಅಧ್ಯಯನದ ಉದ್ದೇಶ, ವ್ಯಾಪ್ತಿ ಮತ್ತು ಸ್ವರೂಪ

ಆಧುನಿಕ ಕನ್ನಡ ಸಾಹಿತ್ಯವು ಹಲವು ಕಾರಣಗಳಿಂದಾಗಿ ವಿಶಿಷ್ಟತೆಯಿಂದ ಕೂಡಿರುವಂತದ್ದು. ತನ್ನ ಹಿಂದಿನ ಕಾವ್ಯ ಪರಂಪರೆಗಳ ಜೊತೆಗಿನ ಸಂಬಂಧಗಳು, ಆಧುನಿಕ ಶಿಕ್ಷಣ ಕ್ರಮ, ಯಂತ್ರ ನಾಗರೀಕತೆ, ಸ್ವಾತಂತ್ರ್ಯ ಚಳುವಳಿ ಮತ್ತು ಪಾಶ್ಚಾತ್ಯ ಸಾಹಿತ್ಯ ಪ್ರಭಾವಗಳಿಂದಾಗಿ ಕನ್ನಡ ಸಾಹಿತ್ಯ ಹೆಚ್ಚು ವೈವಿಧ್ಯತೆಯನ್ನು , ವಿಸ್ತಾರತೆಯನ್ನು ಪಡೆದುಕೊಂಡಿತು. ಹೀಗೆ ಪಡೆಯುವುದರ ಹಿಂದೆ ಅನೇಕ ರೀತಿಯ ಒತ್ತಡಗಳು, ಸಂದರ್ಭಗಳು ಕೆಲಸ ಮಾಡಿವೆ. ಇವತ್ತಿನ ಚಾರಿತ್ರಿಕ ಸಂದರ್ಭದಲ್ಲಿ ಸಾಹಿತ್ಯದಲ್ಲಿ ಅನೇಕ ರೀತಿಯ ಪಲ್ಲಟಗಳು, ಪರಿವರ್ತನೆ, ಮೌಲ್ಯಗಳು ತುಂಬಿಕೊಂಡಿದೆ ಮತ್ತು ಈ ಮೌಲ್ಯಗಳು, ಪಲ್ಲಟಗಳು ಕೂಡಾ ನಿರಂತರವಾಗಿ ಚಲನೆಯನ್ನು ಪಡೆದುಕೊಳ್ಳುತ್ತಿವೆ. ಈ ಕಾಲದಲ್ಲಿನ ಕವಿಗಳೆಲ್ಲರು ಕೂಡಾ ಮೇಲಿನ ಪ್ರಭಾವಗಳಿಂದ ಹೊರತಾದವರಲ್ಲ. ಆದರೆ ಇಂತಹ ಎಲ್ಲಾ ಪ್ರಭಾವಗಳನ್ನು ಜೀರ್ಣಿಸಿಕೊಂಡು ದೇಸೀಯತೆಯ ಸೊಗಡನ್ನು, ಜಾನಪದೀಯ ಜಗತ್ತನ್ನು ತಮ್ಮ ಸಾಹಿತ್ಯದ ಮುಖ್ಯ ಭಿತ್ತಿಯನ್ನಾಗಿ ಮಾಡಿಕೊಂಡವರಲ್ಲಿ ಚಂದ್ರಶೇಖರ ಕಂಬಾರರು ಪ್ರಮುಖರು. ಕೆ.ಸಿ. ಶಿವಾರೆಡ್ಡಿಯವರು ಹೇಳುವ ಹಾಗೆ 'ಸ್ಥಳೀಯತೆಯ ಸತ್ವಗಳನ್ನು ಕೇಂದ್ರ ಪ್ರಜ್ಞೆಯನ್ನಾಗಿಸಿಕೊಂಡು ಸಾಹಿತ್ಯ ಕೃಷಿ ಕಂಬಾರದ್ದು.[1]

ಜಾಗತೀಕರಣದ ಇವತ್ತಿನ ಮಾಯೆ ನಮ್ಮೆಲ್ಲ ಸತ್ವ ಚೈತನ್ಯಗಳನ್ನು, ಕಲೆ, ಸಂಸ್ಕೃತಿಯನ್ನು ನಾಶಗೊಳಿಸುತ್ತಿರುವ ಸಂದರ್ಭದಲ್ಲಿ ಆಧುನಿಕತೆಯ ಭರಾಟೆಯು ಮನುಷ್ಯ ಸಹಜ ಪ್ರೀತಿ ವಿಶ್ವಾಸ, ಸಂಬಂಧಗಳೂ ಛಿದ್ರಗೊಳ್ಳುತ್ತಿರುವ ಈ ದಿನಗಳಲ್ಲಿ ಕಂಬಾರರದು ಅಖಂಡತೆಯನ್ನು ಎತ್ತಿ ಹಿಡಿಯುವ, ದೇಸಿಯತೆಯ ಸತ್ತ್ವವನ್ನು ಉಳಿಸಿ ಕೊಳ್ಳಬೇಕೆಂಬ ಹಂಬಲ, ತಹತಹ ಮುಖ್ಯವಾದದ್ದು. ಕಂಬಾರರ ಇಡೀ ಸಾಹಿತ್ಯಸೃಷ್ಟಿಯು ಕೂಡಾ ಈ ಹಂಬಲವುಳ್ಳದ್ದು . ವರ್ತಮಾನದ ಸಂದರ್ಭದಲ್ಲಿನ ಅನೇಕ ಬಿಕ್ಕಟ್ಟುಗಳು ಸಂಘರ್ಷಗಳ ನಡುವೆಯೂ ಕೂಡಾ ಕಂಬಾರರ ಸಾಹಿತ್ಯವು ತಮ್ಮ ಮೂಲ ನೆಲೆಯಾದ ದೇಸೀಮೌಲ್ಯಗಳು, ಮನುಷ್ಯ ಸಂಬಂಧಗಳ ಅಖಂಡತೆ ಮಾನವೀಯತೆಯನ್ನು ಬಿಟ್ಟುಕೊಟ್ಟಿಲ್ಲ. ನವ್ಯದ ಉತ್ತುಂಗದ ಸಂದರ್ಭದಲ್ಲಿಯೂ ಕೂಡಾ ಕಂಬಾರರು ತಮ್ಮದೇ ಆದ ಸಾಹಿತ್ಯ ಮಾರ್ಗವನ್ನು ರೂಪಿಸಿಕೊಂಡವರು. ಈ ಹಿನ್ನೆಲೆಯಲ್ಲಿ ಕಂಬಾರರ ಸಾಹಿತ್ಯವನ್ನು ಕುರಿತಾದ ಚರ್ಚೆಯು

ಕೇವಲ ನವ್ಯವಿಮರ್ಶಾ ವಿಧಾನಗಳಿಂದ ಸಾಧ್ಯವಾಗುವಂತಿಲ್ಲ ಮತ್ತು ಇಡೀ ಸಂಸ್ಕೃತಿಯ ನೆಲೆಯಲ್ಲಿಯ ಚರ್ಚೆಯು ಮುಖ್ಯ ಎನಿಸುತ್ತದೆ. ಪ್ರಸ್ತುತ ಈ ಅಧ್ಯಯನವು ಕಂಬಾರರ ಚಕೋರಿ ಮತ್ತು ಶಿಖರ ಸಯಾರ ಕೃತಿಗಳು ಮಂಡಿಸುವ ದೇಸಿ ಮೌಲ್ಯಗಳು, ಮನುಷ್ಯ ಸಂಬಂಧಗಳ ಅಖಂಡತೆ, ಪುರಾಣಗಳ ಪುನರ್ ಸೃಷ್ಠಿ, ಆಧುನಿಕತೆ ಮತ್ತು ಪರಂಪರೆಗಳು ಮುಖಾಮುಖಿಯ ನೆಲೆಗಳನ್ನು ಅರಿಯುವುದಾಗಿದೆ.

ಕಂಬಾರರು ಸೃಷ್ಟಿಸಿದ ಸಾಹಿತ್ಯ ಜಗತ್ತು ವಿಶಾಲವಾದದ್ದು. ಕನ್ನಡ ಸಂದರ್ಭದಲ್ಲಿ ಕವಿಯಾಗಿ, ನಾಟಕಕಾರರಾಗಿ, ಕಾದಂಬರಿಕಾರರಾಗಿ, ಸಿನಿಮಾ ನಿರ್ದೇಶಕರಾಗಿ, ಜನಪದ ವಿದ್ವಾಂಸರಾಗಿ ಹಲವು ಕ್ಷೇತ್ರಗಳಲ್ಲಿ ವಿಶಿಷ್ಠತೆಯನ್ನು ಸ್ಥಾಪಿಸಿಕೊಂಡವರು. ಸಾಹಿತ್ಯದ ಹಲವು ಪ್ರಕಾರಗಳಲ್ಲಿ ತಮ್ಮ ವಿಶಿಷ್ಟ ಛಾಪನ್ನು ರೂಢಿಸಿಕೊಂಡವರು. ಲಂಕೇಶರು ಹೇಳುವ ಹಾಗೆ ''ಬರೆಯುವ ಪ್ರಾಮಾಣಿಕತೆ ಮುಖ್ಯವೇ ಹೊರತು ಪ್ರಕಾರಗಳ ಪರಿಶುದ್ಧತೆ ಅಲ್ಲ'' ಎನ್ನುವ ನಿಲುವು ಕಂಬಾರರ ಒಟ್ಟು ಸಾಹಿತ್ಯಕ್ಕೂ ಕೂಡಾ ಅನ್ವಯಿಸುತ್ತದೆ. ಹಾಗೆಯೇ ಈ ಪ್ರಕಾರಗಳನ್ನು ಗಣನೆಗೆ ತೆಗೆದುಕೊಳ್ಳದೇ ತಮ್ಮ ಸಾಹಿತ್ಯ ಸೃಷ್ಟಿಗೆ ಬೇಕಾಗುವ ಹೊಸ ಪ್ರಕಾರಗಳನ್ನು ಕೂಡಾ ರೂಢಿಸಿಕೊಳ್ಳುವ ಶಕ್ತಿ ಕಂಬಾರರಿಗೆ ಇದೆ. ಕವಿಯಾಗಿ ಮತ್ತು ನಾಟಕಕಾರರಾಗಿ ಹೆಚ್ಚು ಮನ್ನಣೆ ಮತ್ತು ಜನಪ್ರಿಯತೆಯನ್ನು ಗಳಿಸಿರುವ ಇವರ ಇತರ ಸಾಹಿತ್ಯ ಕೃತಿಗಳು ಹೆಚ್ಚು ಚರ್ಚೆಗೆ ಒಳಗಾಗಲಿಲ್ಲ ಎಂದೆನಿಸುತ್ತದೆ.ಕಂಬಾರರ ಕಾವ್ಯಕ್ಕೆ ಬಂದಿರುವ ವಿಮರ್ಶೆಗಳು ಮತ್ತು ನಾಟಕದ ಹೊಸ ಹೊಸ ಪ್ರಯೋಗಗಳು ಸಾಹಿತ್ಯ ವಲಯದಲ್ಲಿ ಹೆಚ್ಚು ಚರ್ಚೆ ಮತ್ತು ವಿಮರ್ಶೆಗೆ ಒಳಪಟ್ಟಿದೆ. ಆದರೆ ಈ ಕವಿಯ ಉಳಿದ ಸಾಹಿತ್ಯಕ ಕೃತಿಗಳು, ಕಾದಂಬರಿಗಳು ಕೂಡಾ ಕಾವ್ಯದ ಮುಂದುವರಿದ ಅಥವಾ ವಿಸ್ತಾರ ರೂಪವನ್ನು ಪಡೆದ ಕೃತಿಗಳಾಗಿರುತ್ತವೆ.'ಕಂಬಾರರು ಆಧುನಿಕ ಕನ್ನಡ ಸಾಹಿತ್ಯದ ಮುಖ್ಯ ಪ್ರಶ್ನೆಗಳೆಲ್ಲ ಒಂದಾದ ಆಧುನಿಕತೆ ಮತ್ತು ಪರಂಪರೆಯ ಪ್ರಶ್ನೆಗಳೂ ಕಾದಂಬರಿಯಲ್ಲೂ ಕಾಣಸಿಗುತ್ತವೆ. ಇವರ 'ಕರಿಮಾಯಿ' ಕಾದಂಬರಿಯಿಂದ ಹಿಡಿದು ಶಿಖರ ಸೂರ್ಯ ಕಾದಂಬರಿಯ ತನಕ ಪಾರಂಪರಿಕ ಜಗತ್ತು, ಪುರಾಣಗಳು, ದೇಸೀಯತೆಯ ಮೌಲ್ಯಗಳು , ಭಾಷಿಕಲಯಗಳು, ಕಂಬಾರರ ಆಧುನಿಕ ಸಂವೇದನೆಯನ್ನು ಬಿಟ್ಟುಕೊಟ್ಟಿಲ್ಲ. ಜೊತೆಗೆ ಎಷ್ಟೇ ಆಧುನಿಕತೆಯನ್ನು ಅಪ್ಪಿಕೊಂಡಾಗಲೂ ಕೂಡಾ ಪರಂಪರೆಯ ಕಡೆ ಮುಖ ಮಾಡಿ ಅದನ್ನು ವರ್ತಮಾನಕ್ಕೆ ಪುನರ್ ಸೃಷ್ಟಿಸುವ ಕಲೆ ಕಂಬಾರರಿಗೆ ಮಾತ್ರ ಸಾಧ್ಯವಾದದ್ದು.' ಕಂಬಾರರ ಕಾದಂಬರಿಗಳ ಜಗತ್ತು ಮಂಡಿಸುವ ವಿಧಾನಗಳು, ದರ್ಶನಗಳನ್ನು ಹಿಡಿಯಲು

ನವ್ಯದ ವಿಮರ್ಶಾ ಧೋರಣೆಗಳು ಸಾಕಾಗುವುದಿಲ್ಲವೇನೋ ಅಥವಾ ನವ್ಯದ ವಿಮರ್ಶಾ ಧೋರಣೆಗಳಿಂದ ಹೊರತಾಗಿಯೂ ಇವರ ಕೃತಿಗಳ ಬೇರೊಂದು ಬಗೆಯ ವಿಮರ್ಶೆಯು ಮುಖ್ಯವಾಗುತ್ತವೆ. ಕಂಬಾರರ ಕಾದಂಬರಿಗಳ ಜಗತ್ತಿನ ಸಮಗ್ರ ಗ್ರಹಿಕೆಯಾಗುವ ಬೇರೆಯೂ ವಿಮರ್ಶಾ ಧೋರಣೆಗಳ ಅಗತ್ಯತೆ ಇದೆ. ಈ ಹಿನ್ನೆಲೆಯಲ್ಲಿ ಈ ಅಧ್ಯಯನವು ಅಂತಹ ಮಾರ್ಗಗಳ ಹುಡುಕಾಟವಾಗಿದೆ.

ದೇಸೀಯ ಮೂಲಸೆಲೆಗಳನ್ನು ವರ್ತಮಾನದಲ್ಲಿ ಹೇಗೆ ಜೀವಂತಿಕೆಗೊಳಿಸುತ್ತಾರೆ ಎಂಬುದೇ ಇವರ ಮುಖ್ಯ ಕಾಳಜಿಯಾಗಿದೆ. ಇವರ ಚಕೋರಿ ಮತ್ತು ಶಿಖರ ಸೂರ್ಯ ಕೃತಿಗಳು ಮಂಡಿಸುವ ಮುಖ್ಯ ಅಂಶಗಳಾದ ಜಾನಪದ ಪುರಾಣ, ಅತಿಮಾನುಷ ವಸ್ತು ತಂತ್ರಗಳು, ದೈವಿಕ ಮತ್ತು ಮಾನವ ಜಗತ್ತು, ಆದಿಮ ಕಾಲದ ಕೃಷಿ, ಕುಟುಂಬ, ರಾಜಕೀಯ, ಸಾಮಾಜಿಕ ನೆಲೆಗಳು, ಹೇಗೆ ವರ್ತಮಾನದಲ್ಲಿ ವಿವಿಧ ಆಯಾಮಗಳನ್ನು ಹೊಂದಿವೆ ಎಂಬುದನ್ನು ಅರಿಯುವುದು ಈ ಅಧ್ಯಯನದ ಮುಖ್ಯ ಉದ್ದೇಶಗಳಲ್ಲಿ ಒಂದಾಗಿದೆ. ಚಕೋರಿ ಮತ್ತು ಶಿಖರ ಸೂರ್ಯ ಕೃತಿಗಳನ್ನು ಈ ಅಧ್ಯಯನದ ಕೇಂದ್ರದಲ್ಲಿಟ್ಟಕೊಂಡು ಮೇಲಿನ ಅಂಶಗಳನ್ನು ಚರ್ಚಿಸುವುದಾಗಿದೆ. ಹಾಗೆಯೇ ಇವರ ಉಳಿದ ನಾಟಕಗಳು ಮತ್ತು ಕಾವ್ಯಗಳಲ್ಲಿ, ಕಾದಂಬರಿಗಳಲ್ಲಿ ಬರುವ ಇನ್ನಿತರ ನೆಲೆಗಳಾದ ದೇಹ ಆತ್ಮದ ದ್ವಂದ್ವತೆ, ಮನುಷ್ಯ ಸಂಬಂಧಗಳ ಪ್ರಶ್ನೆ, ಅಖಂಡತೆಯನ್ನು ಛಿದ್ರಗೊಳಿಸುವ ನಾಗರೀಕತೆಯ ಆಧುನಿಕತೆ ಮತ್ತು ಪರಂಪರೆಯ ನೆಲೆಗಳನ್ನು ವಿಶ್ಲೇಷಿಸಲಾಗುವುದು. ಜೊತೆಗೆ ಚಕೋರಿ ಮತ್ತು ಶಿಖರ ಸೂರ್ಯ ಕಾದಂಬರಿಗಳ ಕೇಂದ್ರ ಪಾತ್ರಗಳ ನೋಟಕ್ರಮಗಳನ್ನು ಕೂಡಾ ಈ ಅಧ್ಯಯನವು ವಿಶ್ಲೇಷಿಸುವ ಮುಖ್ಯ ಉದ್ದೇಶವಾಗಿದೆ.

ಈ ಅಧ್ಯಯನವು ಕಂಬಾರರ ಚಕೋರಿ ಮತ್ತು ಶಿಖರ ಸೂರ್ಯ ಕೃತಿಗಳಲ್ಲಿನ ಆಧುನಿಕ ಜಗತ್ತಿನ ಮೌಲ್ಯಗಳು, ವಸಾಹತುಶಾಹಿಯ ಮೌಲ್ಯಗಳು ಉಂಟುಮಾಡುವ ನಿರಂತರ ಸಂಘರ್ಷದ ವಿವಿಧ ನೆಲೆಗಳನ್ನು ದೃಷ್ಟಿಯಲ್ಲಿಟ್ಟುಕೊಂಡು ಅಧ್ಯಯನ ಮಾಡಲಾಗುವುದು. ದೇಸಿ ಸಂಸ್ಕೃತಿಯಲ್ಲಿನ ನಂಬಿಕೆಗಳು, ಬಿಕ್ಕಟ್ಟುಗಳು, ಆಚಾರ-ವಿಚಾರಗಳು, ಕಲೆ ಮತ್ತು ಕಲೆಗಾರರ ವಿವಿಧ ನೆಲೆಗಳು, ಭಾಷಿಕ ಲಯಗಳು, ನಿರೂಪಣಾ ತಂತ್ರವನ್ನು ಅಧ್ಯಯನದ ಕೇಂದ್ರದಲ್ಲಿಟ್ಟು ಅಧ್ಯಯನ ಸಾಗುವುದು. ಕಂಬಾರರ ಒಟ್ಟು ಸಾಹಿತ್ಯದ ದೊಡ್ಡ ರೂಪಕವಾದ 'ಶಿವಾಪುರ' ದ ಜಗತ್ತು ಮತ್ತು ಅದಕ್ಕೆ ಪರ್ಯಾಯವಾದ ಅಥವಾ ವಿರುದ್ಧವಾದ ಆಧುನಿಕ ಜಗತ್ತಾದ 'ಕನಕಗಿರಿ'ಯ ಮೌಲ್ಯ

ಜಗತ್ತುಗಳು ಹೊರಗಿನ ಮತ್ತು ಒಳಗಿನ ಶಕ್ತಿಗಳಿಂದ ತಮ್ಮ ಅಸ್ತಿತ್ವವನ್ನು ಉಳಿಸಿಕೊಳ್ಳುವಲ್ಲಿ ಎದುರಾಗುವ ಬಿಕ್ಕಟ್ಟುಗಳನ್ನು ಆತಂಕಗಳನ್ನು ಅರಿಯುವುದರ ಕಡೆ ಈ ಅಧ್ಯಯನವು ಬೆಳಕು ಚೆಲ್ಲುತ್ತದೆ.

'ಕಂಬಾರರ ಮೊದಲ ಮುಖ್ಯ ಕಾದಂಬರಿಯಾದ 'ಕರಿಮಾಯಿ'ಯಲ್ಲಿ ಬರುವ ಶಿವಾಪುರದ ಮೌಲ್ಯ ವ್ಯವಸ್ಥೆ, ಪಾರಂಪರಿಕ ನ್ಯಾಯಪದ್ಧತಿ, ನಂಬಿಕೆಗಳು, ಹೇಗೆ ಆಧುನಿಕತೆಯಿಂದ ಹೊಸ ಶಿಕ್ಷಣ ಪದ್ಧತಿಯಿಂದಾಗಿ ಸಡಿಲಗೊಳ್ಳುತ್ತಿರುವುದನ್ನು ಕಾಣಬಹುದು. ಇಲ್ಲಿಂದ ಪ್ರಾರಂಭವಾಗುವ 'ಶಿವಾಪುರದ' ಜಗತ್ತು ಭಿನ್ನಭಿನ್ನ ಸಂಘರ್ಷಗಳನ್ನು ಎದುರಿಸುತ್ತಲೇ ತನ್ನದೇ ಆದ ನೆನಪುಗಳಿಂದ ಪುರಾಣಗಳಿಂದ ಬೆಳೆಯುವ ಸಾಮರ್ಥ್ಯವಿದೆ. ಹೊಸರೀತಿಯ ಪುರಾಣಗಳನ್ನು ಬೆಳೆಸುವ ಸಾಮರ್ಥ್ಯವಿದೆ. ಹೊಸರೀತಿಯ ಆತಂಕಗಳು, ಬಿಕ್ಕಟ್ಟುಗಳು ಎದುರಾದಾಗಲೆಲ್ಲಾ ತನ್ನ ಮೂಲ ಸೆಲೆಯನ್ನು ಕಳೆದುಕೊಂಡಿಲ್ಲ. ಸಿಂಗಾರವ್ವ ಮತ್ತು ಅರಮನೆ ಕಾದಂಬರಿಯು ಕೂಡಾ 'ಶಿವಾಪುರ'ದ ಕಥೆಯಲ್ಲವಾದರೂ ಅರಮನೆಗೆ ಇಲ್ಲಿ ಪ್ರತಿರೋಧಗಳು ಸಿಗುತ್ತವೆ. ಈ ಕಾದಂಬರಿಯು ಕೂಡಾ ರಾಜ ಮನೆತನದ ಸ್ವ ಪ್ರತಿಷ್ಠೆ, ಅಹಂಕಾರ, ಕ್ರೌರ್ಯಗಳಿಂದ ತನ್ನಷ್ಟಕ್ಕೆ ತಾನೇ ಅರಮನೆ ನಾಶವಾಗುವ ಚಿತ್ರಣವಿದೆ. ಜೊತೆಗೆ ಸಿಂಗಾರವ್ವನ ಮೃದು ವ್ಯಕ್ತಿತ್ವ, ಕುಡುಕ ಗಂಡನೊಂದಿಗಿನ ವಿಷಮ ದಾಂಪತ್ಯವು, ಆಸ್ತಿಗಾಗಿ ನಡೆಯುವ ಪಿತೂರಿಗಳನ್ನು ಸಿಂಗಾರವ್ವನ ಪ್ರತಿಭಟನೆಯು ಕೂಡಾ ಈ ಕಾದಂಬರಿಯಲ್ಲಿ ಮುಖ್ಯವಾಗುತ್ತದೆ. ಇದನ್ನು ಪ್ರಸ್ತಾಪಿಸಲು ಕಾರಣವಿಷ್ಟೆ.ಕಂಬಾರರ ಒಟ್ಟು ಸಾಹಿತ್ಯದ ಧೋರಣೆಗಳು ತಮ್ಮ ಮುಂದಿನ ಕೃತಿಗಳಲ್ಲಿ ಕೂಡಾ ಹಿಡಿದಿಟ್ಟಿದ್ದಾರೆ.'

ಪ್ರಸ್ತುತ ಈ ಅಧ್ಯಯನದ ಕೇಂದ್ರ ದೃಷ್ಟಿಯು ಚಕೋರಿ ಮತ್ತು ಶಿಖರ ಸೂರ್ಯ ಕೃತಿಗಳಾಗಿವೆ. ಕಂಬಾರರ ಚಕೋರಿ ಮಹಾಕಾವ್ಯ ಅಥವಾ ಕಾದಂಬರಿ.ಕಥನ ಕಾವ್ಯಎಂದು ಕರೆಯಲ್ಪಡುವ ವಿಶಿಷ್ಟ ಕೃತಿಯಾಗಿದೆ. ಕನ್ನಡ ಸಾಹಿತ್ಯದಲ್ಲಿ ಚಕೋರಿಯಂತಹ ಕೃತಿ ರಚನೆಯೇ ಒಂದು ವಿಶಿಷ್ಠ ಸಾಹಿತ್ಯ ಪ್ರಕಾರಕ್ಕೇ ದಾರಿ ತೋರುವುದು. ಅಥವಾ ಈಗಾಗಲೇ ಇದ್ದ ಪ್ರಕಾರಗಳ ಸಿದ್ಧ ಮಾದರಿಯನ್ನು ಮೀರಿ ಹೊಸದಾದ ಶೋಧವೇ 'ಚಕೋರಿ' ಎನ್ನಬಹುದು. ನನ್ನ ಈ ಅಧ್ಯಯನದಲ್ಲಿ ಚಕೋರಿಯನ್ನು 'ಕಾದಂಬರಿ' ಎಂದ ಪರಿಗಣಿಸಿದ್ದೇನೆ. ಕಂಬಾರರೇ ಹೇಳುವ ಹಾಗೆ ಈ ಕೃತಿಯು 'ವಚನ ಕಥಾನಕ'[2] ವಾಗಿದೆ. ಚಕೋರಿಯ ಮುಂದುವರಿದ ಭಾಗವಾಗಿಯೇ ಶಿಖರಸೂರ್ಯ ಕೃತಿ ಎಂಬಗ್ರಹಿಕೆಯ ಹಿನ್ನೆಲೆಯಿದ್ದಾಗಲೂ ಕೂಡಾ ಇದೊಂದು ಸ್ವತಂತ್ರ ಕೃತಿಯು ಆಗಿದೆ. ಈ ಎರಡು ಕೃತಿಗಳಲ್ಲಿ ಮಂಡಿತವಾಗುವ 'ಶಿವಾಪುರ'ದ ಕಥೆಯನ್ನು ಹೇಳಲಾಗಿದೆಯಾದರೂ ಶಿವಾಪುರದ ಮೌಲ್ಯ

ಜಗತ್ತುಗಳು ನಾಶವಾಗುವ ಅನೇಕ ರೀತಿಯ ಬಿಕ್ಕಟ್ಟುಗಳನ್ನು ಎದುರಿಸುವಂತಹ ಬಾಹ್ಯ ಮತ್ತು ಆಂತರಿಕ ಶಕ್ತಿಗಳ ಸೆಣಸಾಟ ಇರುವುದನ್ನು ಕಾಣಬಹುದಾಗಿದೆ. ಆದಿಕಾಲದ ಕೃಷಿ, ಕೌಟುಂಬಿಕ ಪದ್ಧತಿ, ವಿದ್ಯೆ, ಕಲೆ, ದೇವ - ಮಾನವರ ಜಗತ್ತುಗಳು ಚಕೋರಿ ಕೃತಿಯಲ್ಲಿ ಮೈ ತಳೆದಿವೆ. ಶಿಖರ ಸೂರ್ಯದಲ್ಲಿ ಚಕೋರಿಯ 'ಶಿವಾಪುರ'ಕ್ಕೆ ಪರ್ಯಾಯವಾಗಿ ಅಥವಾ ವಿರುದ್ಧವೆಂಬಂತೆ ಕನಕಗಿರಿಯ ಮೌಲ್ಯ ಜಗತ್ತು ಸೃಷ್ಟಿಸುವ ಆತಂಕಗಳನ್ನು ಕಾಣಬಹುದು. ಈ ಎರಡು ಜಗತ್ತುಗಳು ಮಂಡಿಸುವ ಮೌಲ್ಯಗಳು, ಆಯ್ಕೆಗಳು, ದರ್ಶನಗಳು ಭಿನ್ನವಾದದ್ದು. ಇಂತಹ ಭಿನ್ನ ಜಗತ್ತುಗಳ ಮೌಲ್ಯಗಳು ಹೊಂದಿರುವ ಸಮಕಾಲೀನತೆಯ ಭಿನ್ನ ನೆಲೆಗಳನ್ನು ಅರಿಯುವ ಈ ಅಧ್ಯಯನದ ಕಾಳಜಿಯಾಗಿದೆ.

'ಈ ಅಧ್ಯಯನವು ನವ್ಯ ವಿಮರ್ಶೆಯ ಕೆಲವು ವಿಧಾನಗಳನ್ನು ಮತ್ತು ಪುರಾಣ ಪ್ರತೀಕ ವಿಮರ್ಶೆಯನ್ನು ಬಳಸಿಕೊಂಡು ಈ ಎರಡು ಕೃತಿಗಳು ಮಂಡಿಸುವ ಸಂಕೇತ, ರೂಪಕ, ಪ್ರತಿಮೆಗಳನ್ನು ಅರಿಯುವುದಾಗಿದೆ.' ಒಟ್ಟು ಕನ್ನಡದ ಬೇರೆ ಬೇರೆ ಸಾಂಸ್ಕೃತಿಕ ಚಿಂತನೆಗಳನ್ನು ಬಳಸಿಕೊಂಡು ಈ ಅಧ್ಯಯನವು ಸಾಗುತ್ತದೆ.

ಈ ಅಧ್ಯಯನವನ್ನು ಒಟ್ಟು ಐದು ಅಧ್ಯಾಯಗಳಾಗಿ ವಿಭಾಗಿಸಲಾಗಿದೆ. ಕಂಬಾರರು ಮಂಡಿಸುವ ಕಥನ ಕ್ರಮದ ಭಿನ್ನತೆಯಿಂದಲೇ ಅವರನ್ನು ಉಳಿದ ತಮ್ಮ ಸಮಕಾಲೀನ ಲೇಖಕರಿಗಿಂತ ಭಿನ್ನವಾಗಿದ್ದಾರೆ. ಮತ್ತು ಈ ಕಥನ ಕ್ರಮದ ಮೂಲ ನೆಲೆಗಳನ್ನು ಸ್ವರೂಪವನ್ನು ಅರಿಯುವುದು. ಈ ಅಧ್ಯಯನದ ಮೊದಲನೆ ಭಾಗದಲ್ಲಿದೆ. ಅಧ್ಯಯನದ ಎರಡನೆಯ ಭಾಗವು ಕನ್ನಡ ಸಾಹಿತ್ಯದ ಮುಖ್ಯ ವಾಗ್ವಾದಗಳಾದ ಆಧುನಿಕತೆ ಮತ್ತು ಪರಂಪರೆಗಳ ಪ್ರಶ್ನೆಯನ್ನು ಕೇಂದ್ರದಲ್ಲಿರಿಸಿಕೊಂಡಿದೆ. ಆಧುನಿಕತೆ ಮತ್ತು ಪರಂಪರೆಯ ವ್ಯಾಖ್ಯಾನಗಳ ಜೊತೆಗೆ ಇವೆರಡೂ ಮುಖಾಮುಖಿಗೊಳ್ಳುವ ನೆಲೆಗಳನ್ನು ಈ ಅಧ್ಯಾಯವು ಚರ್ಚಿಸುತ್ತದೆ. ಮೂರನೇ ಅಧ್ಯಾಯದಲ್ಲಿ ಕಂಬಾರರ ಸಾಹಿತ್ಯ ಜಗತ್ತಿನ ಮಂಡಿಸುವ ಅನಾಧುನಿಕ ಜಗತ್ತು ಪುರಾಣಗಳು, ಮಾಂತ್ರಿಕ ನೆಲೆ, ಜಾನಪದೀಯ ಅಂಶಗಳು ವರ್ತಮಾನದಲ್ಲಿ ಹೊಸ ಸಂವೇದನೆಗೆ, ಪುನರ್‌ಸೃಷ್ಟಿಯಾಗುವ ಬಗೆಯನ್ನು ಹೇಳಲಾಗುತ್ತದೆ. ಚಕೋರಿ ಮತ್ತು ಶಿಖರಸೂರ್ಯದಲ್ಲಿ ಹೆಣ್ಣು ಮುಖ್ಯ ಭೂಮಿಕೆಯಾಗಿ ಬರುತ್ತಾಳೆ. ಇಂತಹ ಹೆಣ್ಣಿನ ವ್ಯಕ್ತಿತ್ವದ ಬೇರೆ ಬೇರೆ ನೆಲೆಗಳನ್ನು ನಾಲ್ಕನೇ ಅಧ್ಯಾಯದಲ್ಲಿ ಅರಿಯುವುದಾಗಿದೆ. ಕೊನೆಯ ಅಧ್ಯಾಯದಲ್ಲಿ ಕನ್ನಡಕ್ಕೆ ವಿಶಿಷ್ಟವೆನಿಸುವ ನಿರೂಪಣಾ ತಂತ್ರಗಳ ಕ್ರಮದ ಸ್ವರೂಪವನ್ನು ಚರ್ಚಿಸಲಾಗುವುದು. ಈ ಅಧ್ಯಯನವು ಸಾಹಿತ್ಯದ ವಿಮರ್ಶಾಧೋರಣೆಗಳು, ಜನಪದ ಸಿದ್ಧಾಂತಗಳನ್ನು ಅರಿಯುವ ಸಣ್ಣ ಪ್ರಯತ್ನವಾಗಿದೆ.

ಕೊನೆಟಿಪ್ಪಣಿ

1. ಕೆ.ಸಿ.ಶಿವಾರೆಡ್ಡಿ, ಕನ್ನಡದ ಹಾಡು-ಪಾಡು (ಬೆಂಗಳೂರು ಅಧ್ಯಯನ ಮಂಡಲ 2003). ಪುಟ. 223.
2. ಡಾ. ಚಂದ್ರಶೇಖರ ಕಂಬಾರ, ಶಿಖರಸೂರ್ಯ, (ಸಾಗರ, ಹೆಗ್ಗೋಡು, ಅಕ್ಷರಪ್ರಕಾಶನ, 2006) ಮುನ್ನುಡಿ.

# ಅಧ್ಯಾಯ - 2

## ಚಕೋರಿ ಮತ್ತು ಶಿಖರಸೂರ್ಯದ ಕಥನ ಕ್ರಮದ ವಿಶ್ಲೇಷಣೆ

ಕಂಬಾರರು ನವ್ಯದ ಸಂದರ್ಭದಲ್ಲಿ ತಮ್ಮ ಸಾಹಿತ್ಯ ಚಟುವಟಿಕೆಗಳನ್ನು ಶುರು ಮಾಡಿದವರು. 'ನವ್ಯದ ವಾಸ್ತವಾದಿ ಮಾರ್ಗವಾಗಲೀ, ನವ್ಯದ ಕಥನ ಕ್ರಮವಾಗಲೀ, ಅತಿಯಾದ ಸಂಕೇತ, ರೂಪಗಳು ಇಲ್ಲದೇ ತಮ್ಮದೇ ಆದಂತಹ ವಿಶಿಷ್ಟವಾದ ಕಥನ ಕ್ರಮವನ್ನು ರೂಪಿಸಿಕೊಂಡವರು. ಕಂಬಾರರು ಸಾಹಿತ್ಯದ ವಸ್ತು ವೈವಿಧ್ಯತೆಯನ್ನು ಹೇಳಲು ಈಗಾಗಲೇ ಇರುವ ಆಧುನಿಕ ಸಿದ್ಧ ಮಾದರಿಯ ಕ್ರಮದ ಕಡೆಗೆ ಗಮನ ಹರಿಸಿಲ್ಲವೇನು.' ಆದರೆ ಅವರ 'ಕರಿಮಾಯಿ', 'ಜೀಕೆ ಮಾಸ್ತರ ಪ್ರಣಯ ಪ್ರಸಂಗ', 'ಸಿಂಗಾರವ್ವ ಮತ್ತು ಅರಮನೆ' ಕಾದಂಬರಿಗಳು ಕಥನ ಕ್ರಮವು ನವ್ಯ ಸಾಹಿತ್ಯದ ಪ್ರಭಾವಕ್ಕೆ ಒಳಗಾದವು ಎಂದೆನಿಸುತ್ತದೆ. ವಸ್ತುವೊಂದನ್ನು ನಿರ್ವಹಿಸುವ ಕ್ರಮವು, ಪಾತ್ರಗಳ ವೈವಿಧ್ಯತೆ, ಕಥೆಯೊಂದರ ಬೆಳವಣಿಗೆಯ ಮೂಲಕ ಕೃತಿಯೊಂದು ರೂಪುಗೊಳ್ಳುತ್ತದೆ.

ಕಾದಂಬರಿಯ ತಂತ್ರ ಮತ್ತು ವಸ್ತುವಿನ ಬಗ್ಗೆ ಡಾ. ಗಿರಡ್ಡಿ ಗೋವಿಂದರಾಜು ಈ ರೀತಿ ಹೇಳಿದ್ದಾರೆ. ''ವಸ್ತುವಿನ ಅರ್ಥವನ್ನೆಲ್ಲ ಅದರ ನೂರು ನೆರಳುಗಳೊಂದಿಗೆ ಅಭಿವ್ಯಕ್ತಿಸಬಲ್ಲ ಸಾಮರ್ಥ್ಯ ಅವುಗಳಿಗಿರಬೇಕಾಗುತ್ತದೆ. ವಸ್ತುವಿನ ಸೂಕ್ಷ್ಮಗಳನ್ನು ಸರಿಯಾಗಿ ಗ್ರಹಿಸಿ ಸರಳಗೊಳಿಸದೆ ಪರಿಣಾಮಕಾರಿಯಾಗಿ ಪ್ರಕಟಿಸಬಲ್ಲ ತೀಕ್ಷ್ಣತೆ ಬೇಕಾಗುತ್ತದೆ. ಇಲ್ಲವಾದರೆ ಮಹತ್ವದ ವಸ್ತುವಿದ್ದು ಅದರ ಸಾಧ್ಯತೆಗಳನ್ನು ಸರಿಯಾಗಿ ಉಪಯೋಗಿಸಿಕೊಳ್ಳಲಾರದೆ ಕೃತಿ ಸೋಲುತ್ತದೆ. ಇದಕ್ಕೆ ಹೆಚ್ಚಾಗಿ ವಸ್ತುವಿನಲ್ಲಿ ಅಡಕವಾದ ಮೌಲ್ಯಗಳನ್ನು ಬೆಲೆಗಟ್ಟಿ ಅವುಗಳ ಬಗ್ಗೆ ತನ್ನ ಬೆಲೆಯುಳ್ಳ ಧೋರಣೆಗಳನ್ನು ಪ್ರಕಟಿಸುವಂತೆ ಅನುಕೂಲವನ್ನು ಲೇಖಕ ತಂತ್ರದ ಮೂಲಕವೇ ಸಾಧಿಸಿಕೊಳ್ಳಬೇಕಾಗುತ್ತದೆ ಎಂದರೆ ವಸ್ತುವಿನ ಪೂರ್ಣ ಅಭಿವ್ಯಕ್ತಿ ತಂತ್ರವೇ ಎಂದಾಗುತ್ತದೆ.''[1] ಮೇಲಿನದನ್ನು ಉದ್ಧರಿಸಲು ಕಾರಣವಿಷ್ಟೆ. ಕೃತಿಯೊಂದು ರೂಪುಗೊಳ್ಳಲು ಲೇಖಕನು ತನ್ನ ವಸ್ತುವಿನ ಮೂಲಕ ಪಾತ್ರಗಳನ್ನು ಹೇಗೆ ಸೃಷ್ಟಿಸಿ ಕಥೆಯನ್ನು ಹೆಚ್ಚು ಸಮರ್ಥವಾಗಿ ರೂಪಿಸುತ್ತಾನೆ ಎಂಬುದಾಗಿದೆ. ಈ ಕಾರಣದಿಂದ ಕಂಬಾರರ ಚಕೋರಿ ಮತ್ತು ಶಿಖರ ಸೂರ್ಯದ ಕಥನ ಕ್ರಮವನ್ನು ವಿಶ್ಲೇಷಿಸುವುದು ಮತ್ತು ಅವರ ಉಳಿದ ಸಮಕಾಲೀನ ಲೇಖಕರಿಗಿಂತ ತಮ್ಮ ಕಥನ ಕ್ರಮವನ್ನು ಹೇಗೆ ಭಿನ್ನಗೊಳಿಸಿದ್ದಾರೆ ಎಂಬುದನ್ನು ವಿಶ್ಲೇಷಿಸಲಾಗುವುದು. ಕಂಬಾರರ

ಈ ಎರಡು ಕೃತಿಗಳ ವಸ್ತು ಆದಿಮದ್ದು ಎಂದು ಕರೆಯಲಾಗುವ ಕಥೆಯಿದೆ. ಆದರೆ ಕಂಬಾರರ ಈ ಆಯ್ಕೆಯ ಹಿಂದೆಯೆ ಒಂದು ಉಳಿದ ಸಮಕಾಲೀನ ಲೇಖಕರಿಗಿಂತ ತಮ್ಮ ಕಥನ ಕ್ರಮವನ್ನು ಹೇಗೆ ಭಿನ್ನಗೊಳಿಸಿದ್ದಾರೆ ಎಂಬುದನ್ನು ವಿಶ್ಲೇಷಿಸಲಾಗುವುದು.

ಕಂಬಾರರ ಈ ಎರಡು ಕೃತಿಗಳ ವಸ್ತು, ಆದಿಮದ್ದು ಎಂದು ಕರೆಯಲಾಗುವ ಕಥೆಯಿದೆ. ಆದರೆ ಕಂಬಾರರ ಈ ಆಯ್ಕೆಯ ಹಿಂದೆಯೇ ಒಂದು ದೊಡ್ಡ ರಾಜಕಾರಣವಿದ್ದಂತೆ ತೋರುತ್ತದೆ. 'ಏಕೆಂದರೆ ಕಂಬಾರರ ನಿರ್ಮಿಸುವ ಮಿಥ್‌ಗಳು ಭಾರತೀಯರ ಮೇಲು ಪರಂಪರೆಯ ಸಂಸ್ಕೃತಿಯ ಮಿಥ್‌ಗಳನ್ನು ನಿರಾಕರಿಸುವಂತವು. ಇವು ಕನ್ನಡದ ಜನಪದ ಮಹಾಕಾವ್ಯಗಳ ಸತ್ತ್ವದಿಂದ ತಮ್ಮ ಕಥನ ಕ್ರಮಗಳನ್ನು ರೂಪಿಸಿಕೊಂಡವರು. ಅಷ್ಟೇ ಅಲ್ಲದೆ ಜಾನಪದ ಕಥೆಗಳು, ಮಾಂತ್ರಿಕ ನೆಲೆಗಳು, ಕೆಳವರ್ಗಗಳ ಪುರಾಣದ ಜಗತ್ತುಗಳು ಇವರ ಕಥನಕ್ರಮದ ಮೇಲೆ ಛಾಪನ್ನು ಮೂಡಿಸಿವೆ. ಕಂಬಾರರ ಚಕೋರಿಯು ಕಥೆ, ಕಾದಂಬರಿ, ಮಹಾಕಾವ್ಯ ಈ ಎಲ್ಲಾ ಸಿದ್ದ ಪ್ರಕಾರಗಳ ಮಾದರಿಯ ಕಥನ ಕ್ರಮವನ್ನು ನಿರಾಕರಣೆ ಮಾಡಿರುವಂತಹ ಕೃತಿಯಾಗಿದೆ. ಕಾವ್ಯದೊಳಗೆ ಕಥೆ, ಕಥೆಯೊಳಗೆ ಕಾವ್ಯ, ನಾಟಕ ಗದ್ಯಾತ್ಮಕವಾದದ್ದು, ಪದ್ಯಗಳು ಹೀಗೆ ಒಂದೇ ಕೃತಿಯಲ್ಲಿ ಹಲವು ರೂಪಗಳು ಮೈತಾಳಿ ಹೊಸದಾದ ಒಂದು ಸಾಹಿತ್ಯದ ಪ್ರಕಾರ ಮತ್ತು ಕಥನ ಕ್ರಮವನ್ನು ರೂಪಿಸಿದ್ದಾರೆ.'

''ಒಂದು ವಿಶಿಷ್ಟ ಧೋರಣೆಯ ಸಲುವಾಗಿ ಒಂದು ವಿಶಿಷ್ಟ ತಂತ್ರ ಹುಟ್ಟಿಕೊಂಡಿರುವುದರಿಂದ ವಸ್ತುವಿನಿಂದ ತಂತ್ರವನ್ನಷ್ಟೆ ಬೇರ್ಪಡಿಸಿ ಉಪಯೋಗಿಸಿಕೊಳ್ಳಲಿಕ್ಕಾಗುವುದಿಲ್ಲ.''[2] ಕಂಬಾರರ ಚಕೋರಿ ಮತ್ತು ಶಿಖರ ಸೂರ್ಯದ ಕಥನ ಕ್ರಮದಲ್ಲಿಯೇ ಒಂದು ವಿಶಿಷ್ಟ ವಸ್ತುವಿರುವುದನ್ನು ಕಾಣಬಹುದು. ಚಕೋರಿಯ ಕಥೆಯನ್ನು ಹೇಳುವ ಕನಸುಗಳು. ಇಲ್ಲಿ ತಂತ್ರವು ಹೌದು, ಹಾಗೆಯೇ ಪಾತ್ರವು ಕೂಡಾ ಆಗಿದೆ. ಒಂದು ಸಮುದಾಯದ ಆದಿಮ ಕಾಲದ ಕಥೆಯನ್ನು ಹೇಳಲು ಕನಸುಗಳನ್ನು ಬಳಸಿಕೊಂಡಿರುವುದು ಕೂಡಾ ವಿಶಿಷ್ಟವಾಗಿದೆ. ಶಿಖರ ಸೂರ್ಯದಲ್ಲಿಯೂ ಕೂಡಾ ಚರಿತ್ರೆ, ಪುರಾಣ, ಕಥೆ, ಕಥೆಯೊಳಗೆ ಕಥೆಗಳು ಬೆಸೆದುಕೊಂಡಿವೆ. ಕಾದಂಬರಿಯನ್ನು ಹೇಳಲು ಇತಿಹಾಸಕಾರರಿಂದ ಕಥೆಯು ಶುರುವಾಗುತ್ತದೆ. ಹೀಗೆ ಈ ಎರಡು ಕೃತಿಗಳಲ್ಲಿ ಬರುವ ನಿರೂಪಣಣಾ ತಂತ್ರಗಳ ಬಗ್ಗೆ ಬೇರೊಂದು ಅಧ್ಯಾಯದಲ್ಲಿ ಚರ್ಚಿಸಲಾಗುವುದು. ಕಥನ ಕ್ರಮದಲ್ಲಿ ನಿರೂಪಣೆಯು ಇರುವುದರಿಂದ ಅದನ್ನ ಅಲ್ಲಿ ಚರ್ಚಿಸಲಾಗುವುದು ಮತ್ತು

ಘಟನೆಗಳು, ಪಾತ್ರಗಳು, ವಸ್ತುಗಳು, ಮಾಂತ್ರಿಕ ವಿವರಗಳು ವಾಸ್ತವವಾದೀ ನೆಲೆಗಳು ಕೂಡಾ ಕಥನದ ಕ್ರಮದ ವಿಶ್ಲೇಷಣೆಯಲ್ಲಿ ಬಳಸಿಕೊಳ್ಳಲಾಗುವುದು.

ಚಕೋರಿ ಮತ್ತು ಶಿಖರ ಸೂರ್ಯ ಕೃತಿಗಳಲ್ಲಿ ಒಂದು ನಿರಂತರತೆ ಇರುವುದನ್ನು ಕಾಣಬಹುದು. ಚಕೋರಿಯ ವಸ್ತುವಿನಲ್ಲಿ, ಕಥೆಯಲ್ಲಿ, ಪಾತ್ರಗಳು ಮುಂದುವರೆದು ಶಿಖರ ಸೂರ್ಯದಲ್ಲಿ ಪೂರ್ಣಗೊಂಡಿವೆ ಎನ್ನಬಹುದು. ಚಕೋರಿಯ ಪ್ರಾರಂಭ ಶುರುವಾಗುವುದೇ ಪ್ರಾರ್ಥನೆಯನ್ನು ಸಲ್ಲಿಸುವ ಕನಸುಗಳು ಕಥೆಯನ್ನು ಹೇಳುವುದಕ್ಕೆ ಶುರುಮಾಡುತ್ತದೆ. ಈ ಕನಸುಗಳು ಮಾನವ ಜನಾಂಗದ ಆದಿಮ ರೂಪಗಳು. ಇಂತಹ ಕನಸುಗಳ ಮೂಲಕವೇ ಕಂಬಾರರು ಹೊಸ ರೀತಿಯ ಅವಸ್ಥಾಂತರವನ್ನು ಹೊಂದಿದ್ದಾರೆ. ಓ.ಎಲ್. ನಾಗಭೂಷಣಸ್ವಾಮಿ ಗುರುತಿಸುವಂತೆ ''ಅನೇಕ ಬಗೆಯ ಕಥನ ತಂತ್ರಗಳನ್ನು ಬಳಸಿಕೊಳ್ಳುತ್ತದೆ. ಪುರಾಣದ ಕತೆಯಿಂದ ಹಿಡಿದು ಜನಪದ ಕತೆಯ ಸ್ವರೂಪವನ್ನು, ಮಹದೇಶ್ವರ ಕಾವ್ಯದ ಕಥನ ತಂತ್ರದಿಂದ ಹಿಡಿದು ಹಾಡು, ಭಾವಗೀತಾತ್ಮಕ ಗದ್ಯ, ಹೀಗೆ ಗದ್ಯದ ಬೇರೆ ಬೇರೆ ಅವಸ್ಥಾಂತರಗಳನ್ನು ಬಳಸಿಕೊಂಡಿದೆ''[3] 'ಚಕೋರಿಯ ವೈಶಿಷ್ಟ್ಯತೆ ಇರುವುದು ಕೂಡಾ ಇಲ್ಲಿಯೇ ಭಾಷೆಯ ಹೆಚ್ಚು ಕ್ರಿಯಾಶೀಲತೆಯಿಂದ ಕೂಡಿದೆ. ಚಕೋರಿಯ ಕಥೆಯು ಕಲಾವಿದನೊಬ್ಬನು ತಿಂಗಳುರಾಗವನ್ನು ನುಡಿಸುವುದರ ಮೂಲಕ ಚಕೋರಿ ಪಕ್ಷಿಯನ್ನು ಮತ್ತೆ ಜೀವಂತಗೊಳಿಸುವ ಸೃಷ್ಟಿಯಾಗಿದೆ. ಇದರ ನಡುವೆ ಮಾತೃ ಸಂಸ್ಕೃತಿ ಮತ್ತು ಪಿತೃ ಸಂಸ್ಕೃತಿಗಳ ವೈರುಧ್ಯಗಳು, ಕಲೆ ಮತ್ತು ಕಲಾವಿದನ ನೆಲೆಗಳು, ಬಲ ಮತ್ತು ಅಂತಃಶಕ್ತಿಯ ಸಂಘರ್ಷಗಳು, ಯಕ್ಷಿ ಮತ್ತು ಚಂದಮುತ್ತನ ಪ್ರೇಮ ಹೀಗೆ ಅನೇಕ ರೀತಿಯ ನೆಲೆಗಳಲ್ಲಿ ಕಥೆಯು ಸಾಗುತ್ತದೆ. ಜೊತೆಗೆ ಮನುಷ್ಯನ ಮುಗ್ಧತೆಯನ್ನು ಸಮುದಾಯದ ಅಖಂಡತೆಯನ್ನು ಆರಾಧನಾ ಭಾವವನ್ನು ಚಕೋರಿಯ ಕಥಾನಕವು ಶೋಧಿಸುತ್ತವೆ.'

ಕಾದಂಬರಿಯು ಶುರುವಾಗುವುದೇ ಶಿವನು ಸೃಷ್ಟಿಸಿದ ಈ ಲೋಕದ ಬಗ್ಗೆ ಹೇಳುತ್ತಲೇ ತನ್ನ ಹೊಕ್ಕಳು ಬಳ್ಳಿಯಾದ ಲಕ್ಕಬ್ಬೆಯ ಗೊಲ್ಲ ಕುಲವನ್ನು ಕೂಡಾ ಹೇಳುತ್ತದೆ. ಸೂರ್ಯ ಮತ್ತು ಚಂದ್ರನ ಸಂಸ್ಕೃತಿಯವರು ವಿವರಗಳು ಕೂಡಾ ಈ ಕಥನದಲ್ಲಿ ಸೇರಿಕೊಂಡು ಅದು ಚಂದಮುತ್ತನಲ್ಲಿ ಮತ್ತು ಚೆನ್ನಮುತ್ತರಲ್ಲಿ ಮುಂದುವರೆಯುತ್ತದೆ. ಚಂದ್ರನ ಸಂಸ್ಕೃತಿಯವರು ಕಲೆ, ಸಂಗೀತ, ಸಾಹಿತ್ಯಗಳನ್ನು ಆರಾಧಿಸುವವರು. ಸೂರ್ಯನ ಸಂಸ್ಕೃತಿಯವರದ್ದು ''ಬೆಂಕಿ ಮಾಡಿ ಮಾಂಸ ಬೇಯಿಸುವ ತಿನ್ನುವ, ಬೇರಿನಿಂದ ವೈದ್ಯ

ಮಾಡುವ, ಲೋಹದಿಂದ ಆಯುಧ ಮಾಡುವ, ಆಯುಧಗಳಿಂದ ಯುದ್ಧ ಮಾಡಿ ಗೆಲ್ಲುವ''[4] ಹೀಗೆ ರೂಪಗೊಂಡ ಸಂಸ್ಕೃತಿಯ ನೆಲೆಗಳಲ್ಲಿ ಕಲೆ ಮತ್ತು ಸಂಗೀತವನ್ನು ಆರಾಧಿಸುವ ಚಂದ್ರಮುತ್ತ, ಕುತಂತ್ರಗಳು ಆಯುಧಗಳಿಂದ ಗೆಲ್ಲುವ ಸೂರ್ಯಮುತ್ತನ ಕಥೆಗಳು ಚಕೋರಿಯಲ್ಲಿವೆ. ಆದರೆ ಸೂರ್ಯಮುತ್ತನ ಕಥೆಯು ಚಕೋರಿಯಲ್ಲಿ ಹೆಚ್ಚು ಮಹತ್ವ ಪಡೆದಿಲ್ಲ. ಇದರ ಪೂರ್ಣರೂಪವನ್ನು ನಾವು ಶಿಖರ ಸೂರ್ಯದಲ್ಲಿ ಕಾಣಬಹುದಾಗಿದೆ. ಆದರೆ ಚಂದಮುತ್ತನ ಮತ್ತು ಯಕ್ಷಿಯರ ನಡುವೆ ನಡೆಯುವ ಪ್ರೇಮವು ಕೂಡಾ ಮುಖ್ಯವೆನಿಸುತ್ತದೆ. ಮತ್ತು ಇವರಿಬ್ಬರ ಪ್ರೇಮಕ್ಕೆ ಕಂಟಕರಾಗುವ ಮಹಾನುಭಾವ' ನ ಕಥೆಯು ಸೇರಿಕೊಂಡಿದೆ.

'ಚಂದಮುತ್ತನ ತಾಯಿಯಾದ ಲಕ್ಕಬ್ಬೆಯು ಅಧಿಕಾರಯುತವಾದ ಪ್ರೇಮವು ಕೂಡಾ ಮುಖ್ಯ ಪಾತ್ರವಹಿಸುತ್ತದೆ. ಚಂದಮುತ್ತನನನ್ನು ಬೆಳೆಸಿದ ಲಕ್ಕಬ್ಬೆಯು ಅವನಲ್ಲಿ ತುಂಬಿರುವುದು ಕೂಡಾ ಪ್ರೀತಿ, ಪ್ರೇಮ ಭಾವನೆಗಳಿಗೆ ಬೆಲೆ ಕೊಡುವವನು ತಾಯಿಯ ಅಂತಃಶಕ್ತಿಯ ಮೂಲಕವೇ ತನ್ಮಯತೆಯನ್ನು ಪಡೆಯುವ ಹಂಬಲ ಚಂದಮುತ್ತನದು ಕೂಡಾ.'ಲಕ್ಕಬ್ಬೆಯು ತನ್ನ ಮಗನು ಯಕ್ಷಿಯೊಂದಿಗಿನ ಮದುವೆಯ ಸಂದರ್ಭದಲ್ಲಿ ತಿಂಗಳರಾಗವನ್ನು ಕಲಿಯಲು ಹೋದಾಗ ಲಕ್ಕಬ್ಬೆಯ ತಳಮಳವನ್ನು ಗಮನಿಸಿದಾಗ ತನ್ನ ಮಗನನ್ನು ಬಿಟ್ಟುಕೊಡುವ ಆಸೆ ಇರುವುದಿಲ್ಲ. ಯಕ್ಷಿಯ ಗುಡಿ ಬಳಿಹೋಗಿ ಮೆಣಸಿನಕಾಯಿ ನೀರು ಹಾಕಿ ಸಗಣಿಯನ್ನು ಕಲಸಿ ಸುರಿದು ಅವಳನ್ನು ಬೈಯುತ್ತಾಳೆ. ಮಗ ಮನೆಗೆ ಇನ್ನೊಂದು ವಾರದೊಳಗೆ ಬಂದರೆ ನಿನಗೆ ಗುಡ್ಡನನ್ನಾಗಿ ಬಿಡುತ್ತೇನೆ ಎಂದು ಹರಸಿ ಬರುತ್ತಾಳೆ. ಇದಾದ ಒಂದು ವಾರದೊಳಗೆ ಮಗನು ಮನೆಗೆ ಬಂದಾಗ ಲಕ್ಕಜ್ಜಿಯು ಸಡಗರ ಸಂಭ್ರಮ ಹೇಳತೀರದು. ಆದರೆ ಈ ಸಂತೋಷ ಕೂಡಾ ಅಲ್ಪಕಾಲದ್ದು. ಏಕೆಂದರೆ ಚಂದಮುತ್ತನನ್ನು ಗುಡ್ಡನಾಗಿ ಬಿಡಬೇಕಾಗಿ ಬಂದಾಗ ಪರಿತಪಿಸುತ್ತಾಳೆ. ನಂತರ ಚಂದ ಮುತ್ತ ಮತ್ತು ಮುತ್ತಾ ಯಕ್ಷಿ ಮದುವೆಯಾಗುವ ಸಂದರ್ಭದಲ್ಲಿಯು ಕೂಡಾ ತನ್ನ ಕುಲಗುರುವಿನ ಹತ್ತಿರ ಈ ಸಂಬಂಧ ತಪ್ಪಿಸುವಂತೆ ಕೇಳಿಕೊಳ್ಳುತ್ತಾರೆ. ಆಕಾಶದ ಜೊತೆಗಿನವರಲ್ಲಿ ಒಗೆತನ ಸಾಧ್ಯವೇ ಎಂಬ ಅನುಮಾನ ಇವಳದ್ದು. ಆದರೂ ಅಂತಿಮವಾಗಿ ಲಕ್ಕಬ್ಬೆ ಮದುವೆಗೆ ಒಪ್ಪಿಕೊಳ್ಳುತ್ತಾಳೆ. ಚಂದ ಮುತ್ತನು ಶಿಲೆಯಾಗಿ ಮಾರ್ಪಾಟ್ಟಾಗಲೂ ಕೂಡಾ ಇವಳು ಹತಾಶೆ, ಸಂಕಟ ನೋವನ್ನು ಅನುಭವಿಸುತ್ತಾಳೆ. 'ಇಡೀ ಕೃತಿಯ ತುಂಬಾ ಲಕ್ಕಬ್ಬೆ ಛಾಯೆ, ಇವಳ ಮೌಲ್ಯಗಳು ಹರಡಿಕೊಂಡಿರುವುದನ್ನು ಕಾಣಬಹುದು.'

ಲಕ್ಕಬ್ಬೆ ಇನ್ನೊಂದು ರೂಪವೇ ಚಂದಮುತ್ತನು ನುಡಿಸುವ ಪುಣ್ಯಕೋಟಿಯ ಕೊಂಬಿನ ಕೊಳಲು, ಕೃತಿಯ ಉದ್ದಕ್ಕೂ ಕೂಡಾ ಲಕ್ಕಬ್ಬೆ-ಯಕ್ಷಿಯ ಸಂಘರ್ಷವನ್ನು ಕೂಡಾ ಕಾಣಬಹುದು. ಕಥೆಯ ಮುಖ್ಯ ಭೂಮಿಕೆಯಾಗಿಯೂ ಕೂಡಾ ಇವರಿಬ್ಬರ ಸಂಘರ್ಷವನ್ನು ಕಾಣಬಹುದು. ತಾಯಿಯಾದ ಲಕ್ಕಬ್ಬೆಯ ಮೌಲ್ಯಗಳನ್ನು ಪ್ರತಿನಿಧಿಸುವ ಚಂದಮುತ್ತನನ್ನು ಯಕ್ಷಿಯು ಮದುವೆಯಾಗುವುದರ ಮೂಲಕ ತಾಯ್ತನದ ಹತಾಶೆಯು ಕೂಡಾ ಉಂಟಾಗುತ್ತದೆ. ತನ್ನ ಮಗನ ಸುಖ ಸಂತೋಷಗಳನ್ನು, ದುಃಖವನ್ನು ನೋಡಿ ತಾನು ಕೂಡಾ ಮರುಕಗೊಳ್ಳುವಂತವಳು. ಕೀರ್ತಿನಾಥ ಕುರ್ತಕೋಟಿಯವರು ಗುರುತಿಸುವಂತೆ ಈ ಲಕ್ಕಬ್ಬೆಯು ಆದಿಮಾಯೆಯ ಪ್ರತಿರೂಪ ಅಥವಾ ನಕಲು ಎಲ್ಲಾ ಪ್ರತಿರೂಪಗಳಂತೆಯೇ ಆಕೆ ಮೂಲದ ನಕಲಾದರೂ ಮೂಲಕ್ಕಿಂತ ಭಿನ್ನ. ಮೂಲವು ಪ್ರತಿರೂಪಕ್ಕಿಂತ ಶ್ರೇಷ್ಠರಾದದ್ದು ಮತ್ತು ಅದರ ಅಸ್ತಿತ್ವ ಮೂಲವನ್ನು ಅವಲಂಬಿಸಿದ್ದು ಸಂಗೀತ ಸ್ಪರ್ಧೆಯಲ್ಲಿ ಚಂದಮುತ್ತ ಭಾಗವಹಿಸಿದಾಗ ಲಕ್ಕಬ್ಬೆ ಪ್ರತಿಬಿಂಬದಿಂದ ಪವಿತ್ರಗೊಂಡ ನೀರನ್ನು ಚಂದಮುತ್ತನಿಗೆ ಕುಡಿಯಲು ಕೊಡುವುದರೊಂದಿಗೆ ಅವನನ್ನು ಚೇತರಿಕೆಯನ್ನುಂಟು ಮಾಡುತ್ತಾಳೆ''[5]. ಲಕ್ಕಬ್ಬೆ ಇಡೀ ಕಥೆಯಲ್ಲಿ ಸೃಷ್ಟಿಸುವ ಹಂಬಲವುಳ್ಳವಳಾಗಿದ್ದಾಳೆ.

ಚಕೋರಿಯ ಕಥನದ ವೈಶಿಷ್ಟ್ಯಯಿರುವುದೇ ಚಂದಮುತ್ತನ -ಯಕ್ಷಿಯರ ಪ್ರೇಮ ಪ್ರಸಂಗದ್ದು ಮತ್ತು ಈ ಮೂಲಕ ನಡೆಯುವ ಘಟನಾವಳಿಗೂ ಇಡೀ ಕೃತಿಯ ತುಂಬಾ ವ್ಯಾಪಿಸಿಕೊಂಡಿವೆ. ಚಕೋರಿ ಎಂಬ ಯಕ್ಷಿಯನ್ನು ಪ್ರೇಮಿಸುವುದರ ಮೂಲಕವೇ ಚಂಡಮುತ್ತನ ಕಲೆಯ ಹುಡುಕಾಟವು ಶುರುವಾಗುತ್ತದೆ. ಕಲಾವಿದ ಚಂದಮುತ್ತನ ಕಲೆಯನ್ನು ಹುಡುಕ ಹೊರಟ ಪಯಣವು ಮಾಂತ್ರಿಕ ಲೋಕದ್ದು ಎನ್ನಬಹುದು. ಇವನ ಹುಡುಕಾಟದ ಮೂಲಕವೇ ಕಲೆಯು ಕೂಡಾ ಇಂತವನನ್ನೇ ಹುಡುಕುತ್ತದೆ ಎಂಬುದನ್ನು ಕಾಣಬಹುದು. ಈ ಮಾತುಗಳನ್ನು ಗಮನಿಸಬಹುದು.

''ಕಲಾವಿದನಂತೆ ಕಲೆಯು ಹುಡುಕುತ್ತದೆ.
ತಕ್ಕವನನ್ನೇ
ಹಾಗೆ ಪರಸ್ಪರ ಹುಡುಕಿ ಪಡಕೊಂಡವರು
ನಾವು ನಿನ್ನನ್ನು ,
ನೀನು ನಮ್ಮನ್ನು ಕಲಿತುಕೋ ಬೇಕಪ್ಪ ಖಾಲಿಯಾಗುವು
ಹಾಗೆಯೇ ಬೇರೊಂದು ಬೆಳಕು ನುಗ್ಗಿದಾಗ ತುಂಬಿಕೊಳ್ಳದನ್ನು''[6]

ಇಂತಹ ಮಾತುಗಳಿಂದ ಕಲೆ ಮತ್ತು ಕಲಾವಿದನ ಸಂಬಂಧಗಳ ಬಗ್ಗೆ ಕಲಾಸಾಧನೆಯ ಬಗ್ಗೆ ಅತೀವ ಶ್ರದ್ಧೆಯನ್ನು ವ್ಯಕ್ತಪಡಿಸುತ್ತದೆ. ಕೆ.ಸಿ. ಶಿವಾರೆಡ್ಡಿಯವರು ಹೇಳುವ ಹಾಗೆ ''ಕಲಾವಿದನೊಬ್ಬ ಕಲಾಸಾಧನೆಯ ಮೆಟ್ಟಲುಗಳನ್ನು ಏರುವ, ಕಲೆಯ್ನ ತನ್ನದಾಗಿಸಿಕೊಳ್ಳಲು ಎದುರಾಗುವ ಕಷ್ಟ ಪರಂಪರೆ, ದುಃಖ ದುಮ್ಮಾನ, ದುರಂತಗಳು ಇಲ್ಲಿವೆ. ಕಲಾಸಾಧಕ ತನ್ನಲ್ಲಿರುವ ಅಸೂಯೆ, ಈರ್ಷೆಗಳನ್ನು ಕಳಚಿಕೊಳ್ಳುತ್ತಲೇ ಅತ್ಯಂತ ಶ್ರದ್ಧಾಮುಖಿಯಾಗಿ ಬಲಿದಾನದಿಂದ ಕಲೆಯನ್ನು ಒಲಿಸಿಕೊಳ್ಳಬೇಕೆಂಬ ಧ್ವನಿ ಮತ್ತು ಆಶಯಗಳನ್ನು ಚಕೋರಿಯು ತನ್ನ ಕಥಾ ಹಂದರದಲ್ಲಿ ಹೊಂದಿದೆ.''[7]

ಚಂದಮುತ್ತ -ಸೂರ್ಯಮುತ್ತನ ಪಾತ್ರಗಳು ಚಕೋರಿಯಲ್ಲಿ ಸಾಂಕೇತಿಕ ಪಾತ್ರಗಳಾಗಿ ಕಾಣುತ್ತವೆ. ಚಕೋರಿಯ ಪ್ರಾರಂಭದಲ್ಲಿಯೇ ತಾನು ಪ್ರಾತಿನಿಧಿಕವಾಗಿ ಬರುತ್ತದೆ. ಕಲೆ ಮತ್ತು ಸೇಡಿನ ದಾರಿಗಳು ಸಂಧಿಸುವ, ಹೊಸವಿದ್ಯೆ, ಹೊಸ ಆಯುಧಗಳು, ಯುದ್ಧಗಳನ್ನು ಮಾಡಲು ಪ್ರಾರಂಭಗೊಳ್ಳುತ್ತದೆ. ಹೀಗೆ ಪ್ರಾರಂಭಗೊಂಡ ನಂತರ ಕಥೆಯು ಮುಂದುವರಿದು ಚಂದಾಮುತ್ತನ ಯಕ್ಷಿಯನ್ನು ಪ್ರೀತಿಸುವುದು, ತಿಂಗಳರಾಗವನ್ನು ನುಡಿಸಲು ಯಕ್ಷಿಯ ಬೆನ್ನತ್ತಿ ಹೋಗುವುದು ಆ ಮೂಲಕ ಸಿದ್ಧಿಸುವ ಕಲೆಯನ್ನು ನಾಶಮಾಡಲು ತೊಡಗುವ ಮಹಾನುಭಾವ ಮತ್ತು ಸೂರ್ಯಮುತ್ತನ ಕೆಡಕುಗಳನ್ನು ಚಕೋರಿಯು ಹಿಡಿದಿಡುತ್ತವೆ. ಮಹಾನುಭಾವನ ವಿದ್ಯೆಯಿಂದಲೇ ಯಕ್ಷಿಯನ್ನು ನಿರ್ಜೀವಗೊಳಿಸುವ ಅಂಶವು ಕೂಡಾ ಮುಖ್ಯವಾದದ್ದು ಏಕೆಂದರೆ ಕಲೆಯಿರುವುದು ಮಾನವನ ಸಾರ್ಥಕತೆಗೆ ಅಂತಹ ಕಲೆಯನ್ನು ಕೂಡಾ ವಿಕೃತಗೊಳಿಸುವ ದುರಂತತೆಯನ್ನು ಕಾಣಬಹುದು. ಹೀಗೆ ಮನುಷ್ಯ ಕಲೆಯ ಬೆನ್ನುಹತ್ತಿ ನಾಗರೀಕತೆ, ಆಧುನಿಕತೆಯನ್ನು ರೂಪಿಸಿಕೊಂಡು ಅದನ್ನು ನಾಶಗೊಳಿಸುವ ಮಹಾನುಭಾವ ಸೂರ್ಯಮುತ್ತರು ಇವತ್ತಿನ ಸಂದರ್ಭದಲ್ಲಿ ಮನುಷ್ಯನು ವಿಜ್ಞಾನ, ಆಧುನಿಕ ಪ್ರಗತಿಯ ಹೆಸರಿನಲ್ಲಿ ನಡೆಸುತ್ತಿರುವ ಕ್ರೌರ್ಯವನ್ನು ಪ್ರತಿನಿಧಿಸುತ್ತದೆ. ಚಂದ್ರಮುತ್ತನ ಕಲೆಯ ಆರಾಧಕನಾಗಿ ಮಳೆಯನ್ನು ತರಿಸುವ ರಾಗವನ್ನು ನಡೆಸುವುದರ ಮೂಲಕ ಬರಡಾಗಿರುವ ಭೂಮಿಗೆ ಜೀವಕಳೆಯನ್ನು ತುಂಬುತ್ತಾನೆ. ಚಂದಮುತ್ತನ ಈ ಕಲೆಯಿರುವುದೇ ಜೀವಸೃಷ್ಟಿಗಾಗಿ. ಜೀವಂತಿಕೆಯ ಸಮೃದ್ಧಿಯನ್ನು ಹೆಚ್ಚಿಸುವ ಸಲುವಾಗಿಯೇ ಹೀಗೆ ಚಂದಮುತ್ತನ ಕೊಳಲ ಹಾಡಿನಿಂದ ಮಳೆ ಬಂದು

''ಕಂಡಲ್ಲಿ ಪಲ್ಲವಿಸಿ ಫಲ ಹೆರುವ ಮರಗಳು
ಜೇನು ತುಂಬಿದ ಹೂಗಳೆಲ್ಲಾ ಕಡೆ.
ದೀಪಗಳು ಉರಿದಾವು ಸಂಪಿಗೆಯ ಮರದಲ್ಲಿ
ತುಂಬಿಗಳ ತುಟಿಯಲ್ಲಿ ಹಾಡು ಜಿನುಗಿ''[8]

ಹೀಗೆ ಚಂದಮುತ್ತ ಭಾವಗಳ ಭಾಗವಾಗಿ ನೋಡುವುದಾದರೆ ಬುದ್ಧಿಯ ಭಾಗವಾದ ಸೂರ್ಯಮುತ್ತನು ಬುದ್ಧಿಯಿಂದ ಬೆಳವಣಿಗೆಗೊಂಡ ವಿಕಾರಗೊಂಡವನು. ಇದು ''ಭಾವದ ಬೆಳವಣಿಗೆಗೊಂಡ ಯಕ್ಷಿಯ ಸಂಯೋಗಕ್ಕೆ ಹಂಬಲಿಸುತ್ತ ಊರ್ದ್ವ ಮುಖಿಯಾಗುತ್ತದೆ. ಅವನಿಗೆ ಬೆಳದಿಂಗಳ ರಾಗ ದಕ್ಕುವುದು ಯಕ್ಷಿಯ ದೈವಿಕ ಸಾಹಚರ್ಯದಲ್ಲಿ ಮಾತ್ರ. ಆದರೆ ಇಂತಹ ಬೆಳದಿಂಗಳ ರಾಗದ ಸಿದ್ಧಿಯನ್ನು ಪಡೆಯಬೇಕಾದರೆ ಬುದ್ಧಿಯ ತಂತ್ರ ಕುತಂತ್ರಗಳ ಕಾಡು ಕಂಟಕಗಳನ್ನು ಚಿನ್ನ ಮುತ್ತ ಮಹಾನುಭಾವರುಗಳ ವಾಮಾಚಾರದ ಕೇಡುಗಳನ್ನು ಜಯಿಸಬೇಕು.''[9]

ಚಂದಮುತ್ತ ಯಕ್ಷಿಯನ್ನು ವಿಮೋಚನೆಗಾಗಿಯೇ ತಾನು ಕಲ್ಲಾಗುವ ಸಂದರ್ಭವು ತುಂಬಾ ಮುಖ್ಯವಾದ ರೂಪಕ ಎನ್ನಬಹುದು. ತಿಂಗಳರಾಗವನ್ನು ಅಮಾವಾಸ್ಯೆ ದಿನ ನುಡಿಸಿ ಚಂದ್ರನನ್ನು, ಬೆಳದಿಂಗಳನ್ನು ಚೆಲ್ಲಿ ತಾನು ಪ್ರತಿಮೆಯಾಗುತ್ತಾನೆ. ಈ ಮೂಲಕ ಕಲೆಯು ಪ್ರತಿನಿಧಿಯಾದ ಚಕೋರಿಯನ್ನು ಜೀವಂತಗೊಳಿಸಿ ಕಲೆಯು ಉಳಿಯುವಂತೆ ಮಾಡುತ್ತಾನೆ. ಚಂದಮುತ್ತ ಶಿಲೆಯಾದರೂ ಕಲೆಯು ಮುಂದುವರೆದಿದೆ. ಕೆ.ವಿ.ನಾರಾಯಣರವರು ಗುರುತಿಸಿದಂತೆ ''ಚಂದ್ರಮುತ್ತನಿಗೆ ಬಿಂಬವಿಲ್ಲ. ಪ್ರತಿಯಾದ ಪಾತ್ರಗಳಿವೆ''.[10] ಈ ಪ್ರತಿಯಾದ ಪಾತ್ರಗಳು ಕೂಡಾ ಚಂದಮುತ್ತನಿಗೆ ಪೂರಕವಾಗುತ್ತವೆ. ಅವನು ಶಿಲೆಯಾದ ಸಂದರ್ಭದಲ್ಲಿಯೇ ಯಕ್ಷಿಯು ಪಕ್ಷಿಯಾಗಿ ಮಾರ್ಪಾಡುತ್ತಾಳೆ. ಮತ್ತು ಇವರಿಬ್ಬರೂ ಕೂಡಾ ಒಂದಾಗುವುದನ್ನು ಈ ಕೆಳಗಿನ ಸಾಲುಗಳನ್ನು ನೋಡಬಹುದು.

ಚಂದ್ರಾಮನಂಬೂವ ಕನ್ನಡಿ ಮಾಡಿ
ನನ್ನ ಕನ್ನಡಿ ಮಾಡಿ ಅದರ ಎದುರಿಟ್ಟ
ಪ್ರತಿಬಿಂಬ ನೆರೆದಾವು ಬಿಂಬದ ಜೋಡಿ
ಬಯಲಾಗ ಸೇರ್‍ಯಾವು ನಿರ್ವಯಲಾಗಿ [11]

ಎಂಬಲ್ಲಿ ಚಂದಮುತ್ತನು ಯಾವುದಕ್ಕೂ ಬದ್ದನಾಗದ, ಕಾಲದೇಶಗಳನ್ನು ಮೀರುವ ಸ್ಥಿತಿಯದು. ಕೊನೆಯದಾಗಿ ಅವನು 'ಆತ್ಮದ ತುಂಬ ಚಂದಮುತ್ತನ ಬೆಳದಿಂಗಳ ತುಂಬಿಕೊಂಡು ಹೋಗಿರಯ್ಯ''.

ಹೀಗೆ ಚಂದಮುತ್ತನ ಪ್ರತಿಮೆ ಕೇವಲ ಪ್ರತಿಮೆಯಾಗಷ್ಟೇ ಉಳಿಯಲಾರದು. ಅದು ವಾಸ್ತವದಲ್ಲಿ ರೂಪುಗೊಳ್ಳುತ್ತದೆ. ಚಕೋರಿಯ ಬಗ್ಗೆ ಕೆ.ವಿ. ನಾರಾಯಣರವರ ಈ ಮಾತುಗಳನ್ನು ಈ ಸಂದರ್ಭದಲ್ಲಿ ಉಲ್ಲೇಖಿಸಬಹುದು. ''ಚಕೋರಿಯ ಮಹತ್ವವಿರುವುದು ಅದು ಕಂಡುಕೊಳ್ಳುವ ಉತ್ತರದಲ್ಲಿ ಅಲ್ಲ. ಆ ಉತ್ತರವನ್ನು ಕಂಡುಕೊಳ್ಳಲು ಆಯ್ದುಕೊಂಡ ದಾರಿಯಲ್ಲಿ ಕಾಲದೇಶಗಳಿಗೆ ಬದ್ಧವಾಗದೇ ದೈನಿಕ ಲಯಗಳಿಗೆ ಸಿಲುಕದಂತೆ ಈ ಶತಮಾನದ ಈ ಹಂತದಲ್ಲಿ ಕನ್ನಡವನ್ನು ಬಳಸುವುದು ಸಾಹಸದ ಕೆಲಸ. ಈ ಕಥಾನಕ 'ಆಗುವ' ಮಾದರಿಯದ್ದು. 'ಹೇಳುವ' ಮಾದರಿಯದ್ದಲ್ಲ . ಈ 'ಆಗುವಿಕೆ' ಅವಶ್ಯವಾದ ಅನನ್ಯವೆಂಬ ಕಥಾರೂಪವನ್ನು ಈ ಕೃತಿ ರೂಪಿಸಿಕೊಂಡಿದೆ.[13]

ಚಕೋರಿಯು ಕಥನ ಕ್ರಮವು ಈ ರೀತಿ ಸಿದ್ಧರೂಪವಲ್ಲದ ಒಂದು ನಿರಂತರವಾಗಿ ಆಗುವ ರೂಪಗಳನ್ನು ಪಡೆಯುತ್ತಾ ಹೋಗುತ್ತದೆ. ಈ ರೂಪದಲ್ಲಿ ಲಕ್ಕಬ್ಬೆಯ ವಾತ್ಸಲ್ಯ, ಹಂಬಲಗಳು, ಚಕೋರಿಯ ಕಲೆಯು ಚಂದಮುತ್ತನ ಭಾವಗಳು, ಗುರುವಾದ ಮಹಾನುಭಾವನ ಕಲೆಯನ್ನು ಕೆಡಿಸುವ ಬುದ್ಧಿ, ಭಾಷೆಯ ವಿವಿಧ ಲಯಗಳು ಈ ಕೃತಿಯ ಕಥನ ಕ್ರಮದ ವೈಶಿಷ್ಟ್ಯವಾಗಿದೆ.

ಕಂಬಾರರ ಚಕೋರಿಯ ಮುಂದುವರೆದ ಕೃತಿ ಶಿಖರಸೂರ್ಯ ಇದು ಚಕೋರಿಯಲ್ಲಿ ಸಾರ್ಥಕವಾಗಿರದೇ ಅನೇಕ ಅಂಶಗಳು ಇಲ್ಲಿ ಮೈದಾಳಿವೆ. ಚಕೋರಿಯ ಕತೆಯು ಅಲ್ಲಿಯೇ ಮುಗಿಯದೇ ಅದು ಶಿಖರಸೂರ್ಯದಲ್ಲೂ ಮುಂದುವರೆಯುವ ಬೇರೆ ಬೇರೆ ಅರ್ಥಾಂತರಗಳನ್ನು ಪಡೆಯುವ ಕೃತಿಯಾಗಿದೆ. ಶಿಖರ ಸೂರ್ಯದ ಮುನ್ನುಡಿಯಲ್ಲಿ ಎಚ್.ಎಸ್. ಶಿವಪ್ರಕಾಶರು ಹೇಳುವಂತೆ ''ಚಕೋರಿಯ ಕತೆ ಅಲ್ಲಿಗೆ ಮುಗಿದಿದ್ದರೆ ಇದೊಂದು ಸೂಕ್ಷ್ಮ ಕೊರತೆಯಾಗುತ್ತಿತ್ತೇನೋ ಆ ಕತೆಯು ಅಲ್ಲಿಗೇ ಮುಗಿಯದೆ ಶಿಖರಸೂರ್ಯದಲ್ಲಿ ಮುಂದುವರಿದು ಇನ್ನೊಂದು ವಿನ್ಯಾಸ ಪಡೆದಂತಿದೆ. ಈ ಎರಡು ಕೃತಿಗಳು ಕಂಬಾರರ ಒಟ್ಟು ಕೃತಿಗಳ ಹಿನ್ನಲೆಯಾಗುವಲ್ಲಿ ಎರಡೂ ಕೃತಿಗಳಲ್ಲಿ ಅಂತರ್ಗತವಾಗಿದ್ದು ಎರಡನ್ನು ದಾಟಿದ ಮೂರನೆಯ ಅರ್ಥವನ್ನು ಹೊರಡಿಸುತ್ತದೆ.''[14]

ಶಿಖರಸೂರ್ಯ ಕಥನ ಕ್ರಮವು ಚಕೋರಿಗಿಂತ ವಿಶಿಷ್ಠವಾದದ್ದು ಮತ್ತು ಭಿನ್ನವಾಗಿರುವಂತದ್ದು. ಚಕೋರಿಯ ಕಥೆಯನ್ನು ಕನಸುಗಳು ನಿವೇದಿಸಿದರೆ ಶಿಖರಸೂರ್ಯದ ಕಥೆಯನ್ನು ಹೇಳುವವರು ಕನಕಪುರಿಯ ಇತಿಹಾಸಕಾರರು. ಈ ಇತಿಹಾಸಕಾರರು ಕೂಡಾ ಚರಿತ್ರೆಯನ್ನು ಕೇವಲ ಲಿಖಿತ ಅಥವಾ ಆಧಾರಗಳಿರುವ

ದಾಖಲೆಗಳಿಂದ ಅಷ್ಟೇ ಅಲ್ಲದೇ ತಮ್ಮ ಕಥೆಯನ್ನು ಜನಪದ ಪುರಾಣ, ನಂಬಿಕೆಗಳು, ಲಾವಣಿಗಳು, ಐತಿಹ್ಯಗಳಿಂದಲೂ ಹೊಸದಾದ ಚರಿತ್ರೆಯನ್ನು ರೂಪಿಸಿ ಹೊರಟಿರುವಂತಹ ಕಾದಂಬರಿಯ ಉದ್ದಕ್ಕೂ ಘಟನಾವಳಿಗಳನ್ನು ತಮ್ಮದೇ ಆದ ದೃಷ್ಟಿಕೋನದಿಂದ ನಿರೂಪಿಸುವ ಉಪಕಥೆಗಳನ್ನು ಹೇಳುವ ಚರಿತ್ರೆಗಾರರು ತಮಗೆ ಗೊತ್ತಿಲ್ಲದ ಸಂಗತಿಗಳ ಬಗ್ಗೆ ಮಾತ್ರ ಯಾರೋ ವ್ಯಕ್ತಿಯೊಬ್ಬನ ಮಾತುಗಳನ್ನು ಪರಿಗಣನೆಗೆ ತೆಗೆದುಕೊಳ್ಳುತ್ತಾರೆ. ಇಲ್ಲವೇ ಕಾಲ್ಪನಿಕ, ಭ್ರಮೆ, ಕನಸುಗಳ ಮೂಲಕವೇ ಚರಿತ್ರೆಯನ್ನು ಹೇಳಹೊರಟಂತವರು.

ಶಿಖರಸೂರ್ಯದ ಪಾತ್ರಗಳು ಕಥೆ, ವಸ್ತು ಇದು ಮಂಡಿಸುವ ದರ್ಶನ ಇವೆಲ್ಲವೂ ಕೂಡಾ ಚಕೋರಿಯಲ್ಲಿಯೇ ಸೂಚ್ಯವಾಗಿ ಕಾಣಿಸಿಕೊಂಡಿವೆ. ಈ ಕಾದಂಬರಿಯಲ್ಲಿ ಬರುವ ಶಿಖರಸೂರ್ಯ ಅಥವಾ ಜಯಸೂರ್ಯ ಚಕೋರಿಯಲ್ಲಿ ಚಿನ್ನಮುತ್ತನಾಗಿದ್ದವನು ಯಕ್ಷಿಯು -ಗೌರಿಯಾಗಿ ರೂಪುಗೊಂಡವಳು. ಅದೇ ರೀತಿ ಲಕ್ಕಬ್ಬೆ-ಬೆಳ್ಳಿಯಾಗಿ ಚಂದಮುತ್ತ - ನಿನ್ನಡಿಯಾಗಿ ಹೀಗೆ ಪಾತ್ರಗಳೆಲ್ಲವೂ ಕೂಡಾ ರೂಪಾಂತರ ಹೊಂದಿರುವಂತಹುಗಳು. ವಸ್ತುವಿನಲ್ಲಿಯು ಕೂಡಾ ಚಿನ್ನಮುತ್ತನೂ ವಿದ್ಯೆಯನ್ನು ವಾಮಾಚಾರಕ್ಕೆ ಬಳಸಿ ತಂತ್ರಜ್ಞಾನದ ಮೂಲಕವೇ ಹಣ, ಚಿನ್ನ ಸಂಪತ್ತು ಪಡೆದು ಹಲವು ಕುತಂತ್ರಗಳ ಮೂಲಕವೇ ಸಾಮ್ರಾಟನಾಗಿ ಬೆಳೆದವನು. ಗೌರಿಯು ಕೂಡಾ ತನ್ನ ಹಿಂದಿನ ಯಾವುದೋ ನೆನಪು ಬಾಡಿಸುವಂತೆ ಯಾರಿಗಾಗಿಯೋ ಹಂಬಲಿಸುತ್ತಲೇ ಅನೇಕ ಅಡೆ-ತಡೆಗಳ ನಡುವೆ ನಿನ್ನಡಿಯನ್ನು ಸೇರಿಕೊಂಡ ಕಥೆ. ಚಂದಮುತ್ತ - ತರುಣ ಚಂದನಾಗಿ - ನಿನ್ನಡಿಯಾಗಿ ಮಾರ್ಪಾಡುಗೊಂಡ ಕಥೆ ಹಾಗೆ ಕಾದಂಬರಿಯ ಉದ್ದಕ್ಕೂ ನಿರಂತರವಾಗಿ ಮನುಷ್ಯನ ವರ್ತನೆಗಳು ಬದಲಾಗುವ ಹಾಗೇ ಪಾತ್ರಗಳು ಕೂಡಾ ಅವಸ್ಥಾಂತರ ಹೊಂದುತ್ತಿರುತ್ತವೆ.

ಶಿಖರಸೂರ್ಯದ ಕಥೆಯು ಪ್ರಾರಂಭವಾಗುವುದೇ ಶಿವಾಪುರದ ಅಮ್ಮನ ಗುಡ್ಡದಿಂದ. ಶಿವಾಪುರದ ಪ್ರಭಾವ ಇಡೀ ಕಾದಂಬರಿಯ ಉದ್ದಕ್ಕೂ ಪ್ರ ಭಾವ ಬೀರಿರುವುದನ್ನು ಕೂಡಾ ಕಾಣಬಹುದು. ಈ ಪ್ರಭಾವವು ಕೇವಲ ಭಯ, ಅಥವಾ ಭಕ್ತಿಗೌರವಗಳಿಂದಲ್ಲ. ಇಲ್ಲಿನ ನಿಜವಾದ ಮಾನವೀಯ ಸಂಬಂಧಗಳನ್ನು ಉಳಿಸಿ ಬೆಳೆಸುವ, ವಿದ್ಯೆಯನ್ನು ಮನುಷ್ಯನ ಕಲ್ಯಾಣಕ್ಕಾಗಿ ಬಳಸಿಕೊಳ್ಳುವ ಕ್ರಮದಿಂದ ಆದರೆ ಇಂತಹ ಶಿವಾಪುರದ ಮೂಲದಿಂದಲೇ ಬಂದ ಚಿನ್ನಮುತ್ತ ಚಂಡೀದಾಸ, ಕುರುಮುನಿ, ನಾಗಾರ್ಜನ ನಂತವರು ವಿದ್ಯೆಯನ್ನು ಸ್ವಾರ್ಥಕ್ಕೆ ಉಪಯೋಗಿಸಿಕೊಳ್ಳುವ ದಾವಂತದಲ್ಲಿ ಆಗುವ

ಮೌಲ್ಯಗಳ ಪಲ್ಲಟವನ್ನು ದುರಂತತೆಯನ್ನು ಕಾದಂಬರಿ ವಿಷಾದಕರವಾಗಿ ಚಿತ್ರಿಸಿದೆ ಮತ್ತು ಈ ಮೌಲ್ಯಗಳು ಪ್ರತಿಪಾದಿಸುವ ಅಂಶಗಳು ಕೂಡಾ ನಾಶಗೊಳ್ಳುವಂತವು.' ಶಿಖರ ಸೂರ್ಯ ಶಿವಾಪುರದ ಬೆಟ್ಟದಲ್ಲಿ ತಾನು ಕಲಿಯುವ ವಿದ್ಯೆ ಅದರ ಮೂಲಕ ವಜ್ರದೇಹಿಯಾಗುವುದು, ವಾಮವಿದ್ಯೆಗಳು, ಇತ್ಯಾದಿಗಳ ಮೂಲಕವೇ ತನ್ನ ನಂಬಿಕೆ, ಮೌಲ್ಯಗಳು ಭಿನ್ನ ಎಂಬುದನ್ನು ಸೂಚಿಸುತ್ತವೆ. ಬೆಳ್ಳಿಯನ್ನು ಪಡೆಯಬೇಕೆಂಬ ಹಂಬಲದಿಂದ ಜಟ್ಟಿಗನನ್ನು ಕೊಂದು ಅವಳನ್ನು ಕೂಡುವ ಆಸೆ ಕೈಗೊಳ್ಳದೇ ಇದ್ದಾಗ ಅಲ್ಲಿಂದ ತಪ್ಪಿಸಿಕೊಂಡು ತನ್ನ ಮುಂದಿನ ಭವಿಷ್ಯವನ್ನು ಹುಡುಕಿಕೊಂಡು ಕನಕಪುರಿಗೆ ತೆರಳುತ್ತಾನೆ. ಶಿವಾಪುರದಲ್ಲಿ ತಾನು ಕಲಿತ ವಿದ್ಯೆಗಳು ಸಾಕಾರಗೊಳ್ಳುವುದು ಅಥವಾ ಪ್ರಯೋಗಕ್ಕೊಳಪಡುವುದು ಕನಕಪುರಿಯಲ್ಲಿ ಇಡೀ ಕಾದಂಬರಿಯ ತುಂಬಾ ಶಿಖರಸೂರ್ಯನ ಛಾಪು ಹಾಗೆಯೇ ಉಳಿಯುತ್ತದೆ. ಕಾದಂಬರಿಯಲ್ಲಿ ಬರುವ ಬೆಳ್ಳಿ - ಜಟ್ಟಿಗ, ನಿನ್ನಡಿ-ಗೌರಿ, ವಾಸಂತಿ-ರವಿಕೀರ್ತಿ ಅರ್ಥಕೌಶಲ - ಮಹಾರಾಣಿ ಇವರೆಲ್ಲರೂ ಕೂಡಾ ಶಿಖರಸೂರ್ಯನ ಉಪಟಳಕ್ಕೆ ಒಳಗಾಗಿ ಗೆದ್ದವರು ಕೆಲವರಾದರೆ ಸೋತವರು ಕೆಲವರು.

'ಶಿಖರಸೂರ್ಯನು ಅಧಿಕಾರ, ಶಕ್ತಿ ಮತ್ತು ಸಂತೋಷಗಳಿಗಾಗಿ ಸದಾ ಹಾತೊರೆಯುವವನು. ಅದು ಲಭಿಸುವುದು ಬುದ್ಧಿಬಲದಿಂದ ಎಂದು ನಂಬಿ ಆ ಮೂಲಕವೇ ಚಿನ್ನವನ್ನು ತಯಾರಿಸುವ ವಿದ್ಯೆಗಾಗಿ ಹಾತೊರೆದವನು. ತನ್ನ ಸಾಧನೆಗಾಗಿ ಚಿನ್ನವು ಮುಖ್ಯವಾಗಿ ಬೇಕೆಬೇಕೆಂದುಕೊಂಡವನು.' ತನ್ನ ವೈದ್ಯದ ಮೂಲಕವೇ ಕನಕಪುರಿಯ ಅರಮನೆಗೆ ಹತ್ತಿರದವನಾಗಿ ಸಾಮ್ರಾಟನಾಗುವ ಮಹತ್ವಕಾಂಕ್ಷೆಯನ್ನು ಇಟ್ಟುಕೊಂಡವನು. ತನ್ನ ಮಹತ್ವಾಕಾಂಕ್ಷೆಯನ್ನು ಈಡೇರಿಸುವ ಸಲುವಾಗಿಯೇ ಅನೇಕ ಉಪಾಯಗಳು ಕುತಂತ್ರಗಳನ್ನು ಹೆಣೆದವನು. 'ಈ ಕುತಂತ್ರಗಳು ಮತ್ತು ವಿದ್ಯೆಯ ಹಾದಿಯಲ್ಲಿ ಶಿಖರಸೂರ್ಯ ನಡೆಸಿದ ದುರಂತತೆ ಮತ್ತು ಬಲಿಯಾದವರ ಕಥೆಯು ಕೂಡಾ ಆಗಿದೆ.' ಕಾದಂಬರಿಯ ಮುನ್ನುಡಿಯಲ್ಲಿ ಲೇಖಕರು ಹೇಳಿರುವ ಹಾಗೆ ''ವಿದ್ಯೆಯನ್ನು ಸಂಪಾದಿಸುವುದರ ಮೂಲಕ ಅಧಿಕಾರದ ಅನ್ವೇಷಣೆ ಮಾಡ ಹೊರಟು ಆತ್ಮನಾಶ ಮಾಡಿಕೊಂಡವನ ಕಥೆ ಎಂದಿದ್ದಾರೆ.''[15] ಆದರೆ ಶಿಖರಸೂರ್ಯ ಇಂತಹ ವಿದ್ಯೆಯನ್ನು ಮನುಷ್ಯನ ಒಳಿತಿಗೆ ಮಾನವೀಯ ಸಂಬಂಧಗಳನ್ನು ಬೆಳೆಸಲು ಉಪಯೋಗಿಸದೇ ಇರುವಲ್ಲಿಯೇ ದುರಂತ ಅಡಗಿದೆ. ತನ್ನೆಲ್ಲಾ ವಿದ್ಯೆಯನ್ನು ಕೇವಲ ಅಧಿಕಾರ, ಚಿನ್ನ ಮತ್ತು ಬಲಕ್ಕಾಗಿಯೇ ಉಪಯೋಗಿಸಿಕೊಂಡವನು. ಕನಕಪುರಿಯ ಹಾಳಾಗುತ್ತಿರುವ ರಾಜಕೀಯ ವ್ಯವಸ್ಥೆಗೆ ಸಮರ್ಥನೊಬ್ಬ ಬೇಕು ಎಂದೆನಿಸಿದಾಗಲೇ ಶಿಖರಸೂರ್ಯನ ಪ್ರವೇಶವಾಗುವುದು

ಕೂಡಾ ಕಾಕತಾಳೀಯವೇ ಸರಿ. ಮಹತ್ವಾಕಾಂಕ್ಷೆಯನ್ನು ಈಡೇರಿಸುವ ಸಲುವಾಗಿಯೂ ವಿದ್ಯೆಯನ್ನು ಅಧಿಕಾರವನ್ನು ಹರಸುವಿಕೆಗೆ ಬಳಸಿಕೊಂಡು ತನ್ನನ್ನು ತನ್ನ ಕುಟುಂಬದ ಸರ್ವನಾಶವನ್ನು ಮಾಡಿಕೊಂಡವನು. ಈ ಮೂಲಕ ಕಂಬಾರರು ಹೊಸ ದರ್ಶನವನ್ನು ಮಾಡಿಸುತ್ತಿದ್ದಾರೆ.'ಜ್ಞಾನ ವಿಜ್ಞಾನಗಳು ಕೇವಲ ವ್ಯಕ್ತಿಯೊಬ್ಬನ ನಾಶವಷ್ಟೇ ಅಲ್ಲದೇ ಇಡೀ ಸಮುದಾಯಗಳು ಸಮಾಜ ಕೂಡಾ ನಾಶವಾಗುವ ದುರಂತಕಥೆ ಶಿಖರ ಸೂರ್ಯನ ದುರಂತತೆಯಲ್ಲಿ ಅಡಗಿದೆ.'

ಕಾದಂಬರಿಯಲ್ಲಿನ ಕಥೆಯು ಶಿಖರಸೂರ್ಯನ ಮಹತ್ವಾಕಾಂಕ್ಷೆ, ಶಿವಾಪುರದ ಶಿವಪಾದ- ನಿನ್ನಡಿ-ಕನಕಪುರಿಯ ಅರಮನೆಯ ಕುಟಿಲ ತಂತ್ರಗಳು, ಕಂಚಿಯಲ್ಲಿ ರವಿಕೀರ್ತಿಯ ಪ್ರೇಮ ಪ್ರಕರಣ, ಹೀಗೆ ಒಂದನ್ನೊಂದು ಪರಸ್ಪರ ಹೆಣೆದುಕೊಂಡು ಕಾದಂಬರಿಯು ಸಾಗುತ್ತದೆ. ಚರಿತ್ರೆ, ಕನಸುಗಳು, ಕಲ್ಪನೆಗಳು, ಭ್ರಮೆ, ವಾಸ್ತವ, ಅಲೌಕಿಕ ಜಗತ್ತು ಹೀಗೆ ಅಖಂಡವಾಗಿ ನಡೆಯುವ ಎಲ್ಲಾ ವಿವರಗಳು ಸಿಗುತ್ತವೆ. ಕಂಬಾರರು ಈ ಮೂಲಕ ಚರಿತ್ರೆಯ ಬಗ್ಗೆ ಹೊಸ ವ್ಯಾಖ್ಯಾನ ಮತ್ತು ಚರಿತ್ರೆ ಒಳಗೊಳ್ಳಬಲ್ಲ ಅಂಶಗಳನ್ನು ಕುರಿತು ಹೇಳುತ್ತಿದ್ದಾರೆ. ಪುರಾಣಗಳನ್ನು ಕೂಡಾ ಚರಿತ್ರೆಯನ್ನೂ ಕೂಡ ಹೇಳಲು ಬಳಸುತ್ತಾರೆ. ಕಾಲದ ಬಗ್ಗೆ ಕನಕಪುರಿ ಮತ್ತು ಶಿವಾಪುರದ ಬಗ್ಗೆ ಇರುವ ನೋಟಗಳ ಮೂಲಕವೇ ಇದು ತಿಳಿಯುತ್ತದೆ. ಶಿವಾಪುರದವರಿಗೆ ಕಾಲ ಒಂದು ಅಖಂಡ ಘಟಕ. ತಾವು ಬದುಕಿರುವಾಗ ತಮ್ಮೊಂದಿಗೆ ತಮ್ಮ ಹಿಂದಿನ ಎಲ್ಲಾ ಶತಮಾನಗಳ ಅನುಭವಗಳನ್ನು ಇತಿಹಾಸದಲ್ಲಿಟ್ಟು ಬದುಕುತ್ತಾರೆ. ಅಂದರೆ ನೆನಪುಗಳೇ ಇಲ್ಲಿಯ ಕಾಲವನ್ನು ಹಿಂದೆ ತಳ್ಳುತ್ತವೆ.''[16] ಆದರೆ ಕನಕಪುರಿಗೆ ಇತಿಹಾಸವೆಂಬುದು ''ನೆನ್ನೆ ನಡೆದುದೆಲ್ಲ ನೆನಪುಗಳಿಂದ ಜಾರಿ ಇತಿಹಾಸವಾಗಿ ದಾಖಲಾಗಿರುತ್ತದೆ.''[17]ಅಂದರೆ ಇತಿಹಾಸವನ್ನು ನೆನಪುಗಳಿಂದಲೂ ಕೂಡಾ ಮುಂದುವರೆಯಲು ಸಾಧ್ಯ ಎಂಬ ನಿಲುವು ವ್ಯಕ್ತವಾಗುತ್ತದೆ.

ಕಾದಂಬರಿಯಲ್ಲಿ ಶಿಖರಸೂರ್ಯನ ಗೈರು ಹಾಜರಿಯು ಕೂಡಾ ಇದೆ. ತನ್ನ ಅಧಿಕಾರಕ್ಕಾಗಿ ದಾನ್ಯ ಮತ್ತು ಹುಲ್ಲನ್ನು ಚಿನ್ನ ಮತ್ತು ಸೈನಿಕನಾಗಿ ಪರಿವರ್ತಿಸುವ ವಿದ್ಯೆಯನ್ನರಸಿ ಹೋದಾಗ ಕನಕಪುರಿಯನ್ನು ಶಿಖರ ಸೂರ್ಯನಿಲ್ಲದೆಯೂ ಕಾದಂಬರಿ ಮುಂದುವರಿಯುತ್ತದೆ. ಯಾರಿಗೂ ಹೇಳದೇ ದೂರನಾದ ಶಿಖರಸೂರ್ಯನ ಬಗ್ಗೆ ಹಲವಾರು ಕತೆಗಳು ಹುಟ್ಟಿಕೊಳ್ಳುತ್ತವೆ. ಆದರೆ ಆ ಎಲ್ಲಾ ಕತೆಗಳನ್ನು ತಲೆಕೆಳಗಾಗುವಂತೆ ಮಾಡಿ ಮತ್ತೆ ಆಗಾಧವಾದ ಶಕ್ತಿ- ಬಲೆಗಳೊಂದಿಗಿನ ಕನಕಪುರಿಯ ಮೇಲೆ ದಂಡೆತ್ತಿ

ಬಂದು ಅದನ್ನು ವಶಪಡಿಸಿಕೊಳ್ಳುತ್ತಾನೆ. ಇಲ್ಲಿಯವರೆಗೆ ಕನಕಪುರಿ ಮತ್ತು ಶಿಖರ ಸೂರ್ಯದಲ್ಲಿ ಅನೇಕ ರೀತಿಯ ಘಟನಾವಳಿಗಳು ನಡೆದುಹೋಗಿರುತ್ತವೆ. ಕನಕಪುರಿಯಲ್ಲಿ ಅರ್ಥಕೌಶಲನ ಕೊಲೆ ರಾಜನಿಲ್ಲದ ಪರಿಸ್ಥಿತಿ, ಶಿಖರಸೂರ್ಯನ ಹೆಂಡತಿ ಛಾಯಾದೇವಿ ಮತ್ತು ಮಗಳು ಗೌರಿ ಬಿಳಿಗಿರಿಗೆ ಹೋಗಿ ನೆಲಸಿದ್ದು ವಿದ್ಯುಲ್ಲತೆಯು ಶಿಖರಸೂರ್ಯನ ಹಾದಿಯನ್ನು ಕಾಯುತ್ತಿರುವಿಕೆ, ಇತ್ತ ಶಿವಾಪುರದಲ್ಲಿಯೂ ಕೂಡಾ ನಿನ್ನಡಿ ಬೆಳೆದು ದೊಡ್ಡವನಾಗಿ ತಕ್ಕ ವಧುವನ್ನು ಹುಡುಕುತ್ತಾ ಬಿಳಿಗಿರಿಗೆ ಬಂದು ಹೋಗಿದ್ದು, ರವಿಕೀರ್ತಿ ಕಂಚಿಯಲ್ಲಿ ವಿದ್ಯಾಭ್ಯಾಸದ ಜೊತೆಗೇ ವಾಸಂತಿಯನ್ನು ಪ್ರೇಮಿಸಿದ್ದು ಇವೆಲ್ಲವೂ ಕೂಡಾ ಮುಖ್ಯವಾದ ಸಂಗತಿಗಳು. ಆದರೆ ಶಿಖರಸೂರ್ಯನು ಪುನರ್ ಆಗಮನದಿಂದ ಅನೇಕ ಬಿರುಕುಗಳು ಈ ಸಂಬಂಧಗಳ ಮಧ್ಯೆ ಉಂಟಾಗುತ್ತದೆ. 'ಇಲ್ಲಿಂದಾಚೆಗೆ ಇಡೀ ಕಥೆಯು ಸಂಬಂಧಗಳ ಛಿದ್ರೀಕರಣ, ಸಮಾಜದ ಪತನ, ಹೊಸ ಸೃಷ್ಟಿಗಾಗಿ ಹಂಬಲಿಸುವ ನಿನ್ನಡಿ ಶಿವಾಪಾದರ ಕಥೆಯು ಮುಂದುವರಿಯುತ್ತದೆ.'

ಶಿಖರಸೂರ್ಯನ ಮಂಡಿಸುವ ಅನೇಕ ವಿಶ್ವ ಮೌಲ್ಯಾತ್ಮಕ ಗುಣಗಳು, ಆಸಕ್ತಿ ಹುಟ್ಟಿಸುವ ಅನುಭವದ ಸಾಧ್ಯತೆಗಳು ಕಥೆಯೊಳಗಿನ ಉಪಕಥೆಗಳು, ನುಡಿಗಟ್ಟುಗಳು, ಜೀವನ ಮೌಲ್ಯಗಳು, ನಾಗರೀಕತೆಯ ಸೋಂಕಿಲ್ಲದ ಬದುಕು ಇವೆಲ್ಲವೂ ಕೂಡಾ ಇವತ್ತಿನ ಸಂದರ್ಭದಲ್ಲಿ ಅಚ್ಚರಿಹುಟ್ಟಿಸುವಷ್ಟು ತಾಜಾತನದಿಂದ ಕೂಡಿವೆ. ಕಾದಂಬರಿಯ ಒಂದು ತುದಿ ಅಥವಾ ಶಿವಾಪುರದ್ದಾದರೆ ಮತ್ತೊಂದು ಕನಕಪುರಿಯದ್ದು . ಈ ಎರಡು ಜಗತ್ತಿನ ಮೌಲ್ಯಗಳ ಸಾಕಾರಮೂರ್ತಿಯಾಗಿ ರೂಪುಗೊಂಡವರೇ ನಿನ್ನಡಿ ಮತ್ತು ಶಿಖರಸೂರ್ಯ. ಇವರಿಬ್ಬರೂ ಪ್ರತಿನಿಧಿಸುವ ಮೌಲ್ಯಗಳು ಕೂಡಾ ಭಿನ್ನವಾದವುಗಳು. ನಿನ್ನಡಿಯು ತ್ಯಾಗ, ಪ್ರೀತಿ, ವಿಶ್ವಾಸ, ತಾಯಿಮೌಲ್ಯಗಳ ಭಾವದವನು. 'ಆದರೆ ಶಿಖರಸೂರ್ಯ ಹಣ, ಬಲ, ಅಧಿಕಾರ, ಚಿನ್ನ ಸ್ವಾರ್ಥ ಬುದ್ದಿಯ ಮನೋಭಾವದವರು ಇದು ಹಿಂದಿನ ಚಕೋರಿಯಲ್ಲೂ ಕೂಡಾ ಸಾಂಕೇತಿಕವಾಗಿ ಮೂಡಿ ಬಂದಿದೆ. ಇಲ್ಲಿ ಪೂರ್ಣ ಪ್ರಮಾಣದಲ್ಲಿ ರೂಪುಗೊಂಡಿರುವುದನ್ನು ಕಾಣಬಹುದು. ಜೀವ ಉಳಿಸುವ ಸಕಲ ಜೀವಗಳಿಗೂ ಒಳ್ಳೆಯ ದನ್ನು ಬಯಸುವ ಸಮುದಾಯಗಳ ನಂಬಿಕೆಗೆ ಬದ್ಧವಾದ ಶಿವಾಪುರ ಅದಕ್ಕೆ ವಿರುದ್ಧವೆಂಬಂತೆ ಸ್ವಾರ್ಥತೆ, ಭೋಗವಿಲಾಸಗಳ ವ್ಯಕ್ತಿಮಹತ್ವಕ್ಕೆ ಬೆಲೆ ನೀಡುವ ಕನಕಗಿರಿಯು ಶಿವಾಪುರವನ್ನೇ ಕಬಳಿಸುವ ಶಕ್ತಿಯು ಕೂಡಾ ಇದೆ. ಆದರೆ ಇಂತಹ ಶಕ್ತಿಯು ಕೇವಲ ಕೃತಕ ಮತ್ತು ತಾತ್ಕಾಲಿಕವಾದದ್ದು.

ಕಾದಂಬರಿಯು ಕಥನದ ಮತ್ತೊಂದ ಮಗ್ಗಲು ಹೆಣ್ಣು ಪಾತ್ರಗಳ ವೈವಿಧ್ಯ. ಮಾತೃ ಸಂಸ್ಕೃತಿಯ ಮೌಲ್ಯಗಳನ್ನು ಪ್ರತಿಪಾದಿಸುವ ಬೆಳ್ಳಿ, ಗೌರಿಯವರು ಶಿವಾಪುರದ ಗ್ರಾಮೀಣ ಬದುಕಿನ ಸರಳ ಮುಗ್ಧ ಜೀವಿಗಳ ಹಾಗೇ ಕಾಣುತ್ತಾರೆ. ಆದರೆ ಬೆಳ್ಳಿಯ ದಾಂಪತ್ಯ ಜೀವನದ ವಿರಹ ಅವಳನ್ನು ಹೆಚ್ಚು ಪಕ್ವಗೊಳಿಸಿದರೆ ಗೌರಿಯು ಚಂಡಿದಾಸನು ನೀಡುವ ಚಿನ್ನವನ್ನು ತನ್ನ ಕೈಲಿ ಹಿಡಿದು ನಿನ್ನಡಿಯನ್ನು ಕಾಣುತ್ತಾಳೆ. ಆದರೆ ಅಂತಹ ಚಿನ್ನವು ನಿನ್ನಡಿಗೆ ಇಷ್ಟವಾಗಲ್ಲ ಎಂಬ ಕಾರಣಕ್ಕೆ ತಾನೇ ನಿರಾಡಂಬರಾಗುತ್ತಾಳೆ. ಗೌರಿಯು ಕನಕಪುರಿಯವಳಾದರೂ ಅವಳ ವ್ಯಕ್ತಿತ್ವದಲ್ಲಿರುವ ಮೌಲ್ಯಗಳು ಶಿವಾಪುರ ಮೌಲ್ಯಗಳು ತನ್ನ ಮುಗ್ಧತೆ ಪ್ರೀತಿಗಳಿಂದಲೇ ಕ್ರೂರಿ ತಂದೆಯನ್ನು ಎದುರಿಸುವ ತಾಕತ್ತುಳ್ಳವಳು. ಆದರೆ ಉಳಿದವರಿಗೆ ಅದು ಸಾಧ್ಯವಾಗುವುದಿಲ್ಲ. ತನ್ನ ತಂದೆಯಿಂದಲೇ ವಿಷಪ್ರಾಶನಕ್ಕೆ ಒಳಗಾಗಿ ಶಿವಾಪುರ ಸೇರುವ ಇವಳ ಛಲ, ಧೈರ್ಯ ಮೆಚ್ಚುವಂತದ್ದು. ಕನಕಪುರಿಯ ಮಹಾರಾಣಿಯೂ ಕೂಡಾ ರಾಜಸೂಳೆಯಾಗಿ ಅರ್ಥ ಕೌಶಲದ ಪ್ರಭಾವಕ್ಕೆ ಒಳಗಾದವಳು. ತೀವ್ರ ಹಂಬಲವುಳ್ಳ ಮಹತ್ವಾಕಾಂಕ್ಷೆಯ ಹೆಣ್ಣಾಗಿ ಅನೇಕ ಕುತಂತ್ರಗಳನ್ನು ಹೆಣೆದವಳು. ಸ್ವತಃ ಗಂಡನನ್ನೇ ಕೊಲ್ಲಲು ಹವಣಿಸಿದ, ಶ್ವಾನಕೂಪಕ್ಕೆ ಶತ್ರುಗಳನ್ನು ದೂಡಿ ಖುಷಿಪಡುವ, ಸೌಂದರ್ಯವತಿ - ವಿಲಾಸಿ ರಾಣಿಯವಳು. ಕಾದಂಬರಿಲ್ಲಿ ಅತೀ ಹೆಚ್ಚು ಎನ್ನಬಹುದಾದ ಇವಳ ಬಗ್ಗೆ ವರ್ಣನೆಗಳು ಕೂಡಾ ಇವಳ ವ್ಯಕ್ತಿತ್ವದ ಭಾಗವೇ ಆಗಿದೆ. ಶಿಖರ ಸೂರ್ಯನ ತನ್ನ ವೈದ್ಯಕೀಯಕ್ಕೆ ಸವಾಲಾದ ವಿದ್ಯುಲ್ಲತೆ ಎಂಬ ವಿಷಕನ್ಯೆ ಸಂಗದಿಂದ ಪ್ರಸನ್ನಳಾಗಿ ಅವಳು ಮೋಹಿಸುವಷ್ಟು ಸುಂದರಿಯಾಗಿದ್ದವಳು ಮೂಗಿಯಾದರೂ ಅಂತರಂಗದ ಭಾವನೆಗಳನ್ನು ಹಂಚಿಕೊಳ್ಳಬಲ್ಲಷ್ಟು ಛಾತಿ ಇದೆ. ಹಾಗೂ ಶಿಖರ ಸೂರ್ಯನನ್ನು ಪ್ರಸನ್ನಗೊಳಿಸುವ ಪ್ರೀತಿ ಉಳ್ಳವಳು ಇನ್ನು ಶಿಖರ ಸೂರ್ಯನ ಮಡದಿ ಛಾಯಾದೇವಿ ದುರ್ಬಲಳಂತೆ ಕಾಣುತ್ತಾಳೆ.

ಶಿಖರ ಸೂರ್ಯದ ಕಥನಕ್ರಮದ ವೈಶಿಷ್ಟತೆ ಇರುವುದೇ ಅದರ ಕಾವ್ಯ ಗೀತಾತ್ಮಕ ಭಾಷೆಯಲ್ಲಿ ಕಾದಂಬರಿಯಲ್ಲಿ ಬರುವ ಈ ಸಾಲುಗಳನ್ನು ಗಮನಿಸಬಹುದು. ''ಕನಸಿನಲ್ಲಿ ಕಾಣಿಸಿಕೊಂಡ ಜೋಗಿ ಜಂಗಮ ಏನೊಂದನ್ನೂ ನುಡಿದಾಡದೆ ಸೀದಾ ಪಾದವ ಬೆಳೆಸಿದ ದೇವರ ಕೋಣೆಗೆ, ಗಬಗಬ ನೈವೇದ್ಯ ತಿಂದು, ಬಾಯೊರೆಸಿಕೊಂಡ. ಬೇಧಿಸಲಾಗದ ಕತ್ತಲೆಯಲ್ಲಿ''[18] ಕಂಬಾರರು ತಮ್ಮ ಸಾಹಿತ್ಯ ಸೃಷ್ಟಿಗನುಗುಣವಾಗಿ ಸಾಹಿತ್ಯ ಪ್ರಕಾರಗಳನ್ನು ಬದಲಾಯಿಸುವ ಹಿಗ್ಗಿಸುವ ಸಾಮರ್ಥ್ಯವಿರುವವರು.. ಅವರ ಕಥನ ಶಕ್ತಿ ಇರುವುದೇ ಈ ರೀತಿಯ ಕಾವ್ಯಾತ್ಮಕ ರೀತಿಯ ಶಕ್ತಿಯಲ್ಲಿ. ಎಚ್.ಎಸ್. ಶಿವಪ್ರಕಾಶರು ಮುನ್ನುಡಿಯಲ್ಲಿ

ಹೇಳಿರುವಂತೆ ''ಇಲ್ಲಿ ಹಲಬಗೆಯ ಪಾತ್ರ - ಘಟನೆಗಳನ್ನು ಹಿಡಿದಿರುವುದು ಸತ್ವಾತಿಶಯಗಳ ರೂಪದಲ್ಲಿ. ಈ ತೆರನ ಹಿಡಿತವನ್ನು ಸಾಧಿಸಲು ಕಂಬಾರರು ತಮ್ಮ ಕಥನದ ಅಗತ್ಯದಂತೆ ವಾಸ್ತವತಾವಾದಿಯೆಲ್ಲರ ಒಂದು ಸಾಂಕೇತಿಕ ಚರಿತ್ರೆ - ಭೂಗೋಳವನ್ನಿ ತಮ್ಮ ಈ ಹಿಂದಿನ ಕೃತಿಗಳ ಭಿತ್ತಿಯಲ್ಲಿ ಚಲ್ಲುವರಿದಿರುವ ಬಿಡಿ ವಿವರಗಳನ್ನು ಒಟ್ಟುಗೂಡಿಸಿ ಕಟ್ಟಿದ್ದಾರೆ.''[19] ಶಿವಪ್ರಕಾಶರು ಗುರುತಿಸುವ ಹಾಗೆಯೇ ತಮ್ಮ ಹಿಂದಿನ ಎಲ್ಲಾ ಸಾಹಿತ್ಯ ಪ್ರಕಾರಗಳನ್ನು ಒಂದು ಚೌಕಟ್ಟಿಗೆ ಹಿಡಿದಿಟ್ಟ ಕೃತಿ ಇದು. ಕನಸುಗಳ ಮೂಲಕ ಇತಿಹಾಸಕಾರರ ಮೂಲಕ ಕಥನವನ್ನು ಮುಂದುವರಿಸುವ ಕಂಬಾರರ ಕ್ರಮವು ವಿಶಿಷ್ಠ ರೀತಿಯದ್ದು.ಕಥೆಯನ್ನು ಹೇಳುತ್ತಲೇ ಇತಿಹಾಸಕಾರರು ಕೂಡಾ ಕನಸುಗಳನ್ನು, ಹದ್ದನ್ನು ಕಥೆ ಹೇಳಲು ಬಳಸಿಕೊಳ್ಳುತ್ತಾರೆ. ಎಚ್.ಎಸ್. ರಾಘವೇಂದ್ರರಾವ್‌ರು ಇದನ್ನು ಹೀಗೆ ಗುರ್ತಿಸಿದ್ದಾರೆ. ''ಈ ಕಾದಂಬರಿಯ ಶಕ್ತಿಯಿರುವುದು ಅದರ ಕಥನ ಕ್ರಮದಲ್ಲಿ ತಮ್ಮ ಇದುವರೆಗಿನ ಬರವಣಿಗೆಯಲ್ಲಿ ಕಂಬಾರರು ಕಥೆ ಹೇಳುವುದಕ್ಕೆ ಅಷ್ಟೊಂದು ಮಹತ್ವ ಕೊಟ್ಟಿರಲಿಲ್ಲ. ಘಟನೆಗಳಿಂದ, ವರ್ಣನೆಗಳಿಂದ ಮತ್ತು ಪಾತ್ರಗಳಿಂದ ನಿಬಿಡವಾದ ಈ ಕೃತಿಯು ಆಧುನಿಕ ಕಾದಂಬರಿಯ ಚೌಕಟ್ಟಿನೊಳಗೆ ಜಾನಪದ ಕಥನ ಕ್ರಮವನ್ನು ಮತ್ತು ಬಹುಹಿಂದಿನ ಜೀವನ ಕ್ರಮದ ದೈನಿಕಗಳ ವಿವರಗಳನ್ನು ಅಳವಡಿಸಿಕೊಳ್ಳುವ ಪ್ರಯತ್ನವನ್ನು ಮಾಡಿದೆ.''[20] ಶಿಖರ ಸೂರ್ಯದ ಉದ್ದಕ್ಕೂ ಕಂಬಾರರು ಜಾನಪದ ಕಥನ ಕ್ರಮವನ್ನು ಪ್ರಜ್ಞಾಪೂರ್ವಕವಾಗಿ ತಂದಿದ್ದಾರೆ. ಈ ರೀತಿಯ ಕಥನ ಕ್ರಮದ ಮೂಲಕವೇ ಎಲ್ಲಾ ಪಾತ್ರಗಳನ್ನು ಬೆಸೆಯುವ ಕ್ರಮ ವಿನೂತನವಾದದ್ದು.'ಕಾದಂಬರಿಯೊಂದು ಏಕಕೇಂದ್ರವಾದ ಕಥೆಯಿರದೇ ಬಹು ಕೇಂದ್ರದ ಕಥೆಗಳನ್ನು ಉಳ್ಳ ಎಪಿಕ್ ರೀತಿಯ ಕಾದಂಬರಿಯಾಗಿ ಶಿಖರಸೂರ್ಯ ಕೃತಿಯಾಗಿದೆ.'

ಚಕೋರಿ ಮತ್ತು ಶಿಖರ ಸೂರ್ಯ ಕೃತಿಗಳು ಮುಖ್ಯವಾಗಿ ವ್ಯಕ್ತಿಯೊಬ್ಬನ ಕಥೆಯಲ್ಲಿ ಸಮುದಾಯ ಮತ್ತು ವ್ಯಕ್ತಿಗಳ ನಡುವೆ ನಡೆಯುವ ಮೌಲ್ಯಗಳ ಸಂಘರ್ಷವನ್ನು ಕಾಣಬಹುದು. ಚಕೋರಿಯ ಚಿನ್ನ ಮುತ್ತ ಶಿವಾಪುರದ ಮೌಲ್ಯಗಳನ್ನು ಒಪ್ಪಿ ಅದಕ್ಕೆ ಬದ್ಧನಾಗಿ ಅದರ ಪೋಷಕ ಸತ್ವವಾಗುತ್ತಾನೆ. ಆದರೆ ಸೂರ್ಯಮುತ್ತ ಆ ಮೌಲ್ಯಗಳಿಗೆ ಒಪ್ಪಿತನಾಗದೆಯೇ ಅದನ್ನು ಮೀರುತ್ತಾನೆ. ಇದು ಇವನ ವೈಯಕ್ತಿಕ ಮಹತ್ವಾಕಾಂಕ್ಷೆಗಳು. ಸಮುದಾಯದ ಹಿತಾಸಕ್ತಿಗಳಿಗೆ ವಿರುದ್ಧವಾಗಿರುವಂತದ್ದು. ಈ ಕಾರಣಕ್ಕಾಗಿಯೇ ಶಿವಾಪುರದ ಮೌಲ್ಯಗಳು ಮತ್ತು ವೈಯಕ್ತಿಕ ಮೌಲ್ಯಗಳ ತಿಕ್ಕಾಟವಿದೆ. ಶಿಖರ ಸೂರ್ಯದಲ್ಲೂ ಕೂಡಾ ಸಮುದಾಯದ ಹಿತಾಸಕ್ತಿಗೆ ಬದ್ಧವಾಗುವ ನಿನ್ನಡಿ ಕನಕಪುರಿಯನ್ನು ಕೂಡಾ

ಶಿವಾಪುರವನ್ನಾಗಿಸುವ ಹಂಬಲವು ಈತನದು. ಎರಡೂ ಕೃತಿಗಳ ಕಥನಕ್ರಮವು ಕೂಡಾ ಯಾವುದೇ ಒಬ್ಬ ವ್ಯಕ್ತಿ ಕೇಂದ್ರಿತವಾಗಿಲ್ಲದಿರುವುದನ್ನು ಕಾಣಬಹುದು. ಇಡೀ ಸಮುದಾಯಗಳ ಕಥೆಯನ್ನು ಹೇಳುವಲ್ಲಿ ವ್ಯಕ್ತಿ ಸಮುದಾಯದ ಭಾಗವೇ ಹೊರತು ಸಮುದಾಯವು 'ವ್ಯಕ್ತಿಯಿಂದ ನಿರ್ಮಾಣವಾದದ್ದಲ್ಲ ಎಂಬ ನಿಲುವು ತಳಯಬಹುದು. ಎರಡೂಕೃತಿಗಳಲ್ಲಿ ಕಥನ ಕ್ರಮದಲ್ಲಿ ಶಾಪಕ್ಕೆ ಈಡಾಗುವುದು, ಶಿಲೆಯಾಗುವುದು, ಅದನ್ನು ಮೀರುವ ಹಂಬಲವೇ ವ್ಯಾಪಿಸಿಕೊಂಡಿದೆ. ಚಕೋರಿಯಲ್ಲಿ ಚಿನ್ನ ಮುತ್ತ ಕಲ್ಲಾಗುವುದು ಚಕೋರಿಯ ಯಕ್ಷಿಯ ಶಿಲೆಯಾಗಿದ್ದು ಪಕ್ಷಿಯಾಗಿ ರೂಪುಗೊಳ್ಳುವುದು ಸಾಂಕೇತಿಕವೆನಿಸುತ್ತದೆ. ಏಕೆಂದರೆ ಕಥೆಯ ಪ್ರಾರಂಭದಲ್ಲಿ ಶಿಲೆಯಾಗಿದ್ದ ಯಕ್ಷಿ ಅದರಿಂದ ಮುಕ್ತಳಾಗುತ್ತಾಳೆ. ಆದರೆ ಚಿನ್ನಮುತ್ತ ಕೊನೆಯಲ್ಲಿ ಶಿಲೆಯಾಗುತ್ತದೆ. ಈ ಕ್ರಿಯೆಗಳು ಇಡೀ ಕೃತಿಯ। ಅಂತರಾಳವನ್ನು ತೋರಿಸುತ್ತದೆ. ಡಾ. ಕೆ.ವಿ. ನಾರಾಯಣರವರು ಹೇಳುವ ಹಾಗೆ ''ಚಕೋರಿ ಕನಸುಗಳು ನಿವೇದಿಸುವ ಕಥಾನಕ. ಚಕೋರಿಯ ವಿಮೋಚನೆಗಾಗಿ ತಿಂಗಳರಾಗವನ್ನು ಶುದ್ಧಾಂಗವಾಗಿ ನಿರೂಪಿಸುತ್ತಲೇ ಗ್ರಸ್ತನಾದ ಚಂದಮುತ್ತ ಮತ್ತೆ ಮತ್ತೆ ಕನಸುಗಳ ಈ ಕಥಾನಕದಲ್ಲಿ ಮೈ ಬೆಳೆಯುತ್ತಾನೆ. ಚಂದ ಮುತ್ತ ಕಲಿತ ಸಂಗೀತ ಅವನ ಗೆಣೆಯ ಬಾಜನೆ ಕಲೆಯ ಒಂದು ಮುಖ. ಮಹಾನುಭಾವನನ್ನು ಬಿಡುಗಡೆ ಮಾಡುವ ಗಾನಕಲೆ ಇನ್ನೊಂದು ಮುಖ್ಯ. ಆದರೆ ಅದರ ನಿಜರೂಪ ಮುದಿಜೋಗ್ತಿಯ ರೂಪದ ಯಕ್ಷಿಯಿಂದ ಲಭ್ಯ. ಹೀಗೆ ಪಡೆದುಕೊಂಡದ್ದನ್ನು ಕೊಟ್ಟುಕೊಂಡ ಹೊರತು ನಿರ್ವಾಹವಿಲ್ಲ. ಪೀಡಿತ ಚಕೋರಿಯನ್ನು ವಿಮುಕ್ತಗೊಳಿಸುತ್ತ ಚಂದಮುತ್ತ ಶಿಲೆಯಾದ ಕಲೆ ಏಕೆ ಬೇಕೆಂಬ ಹಳೆಯ ಪ್ರಶ್ನೆಗೆ ಇದೊಂದು ಉತ್ತರ. ಕಲೆಯು ಲೋಕದಲ್ಲಿ ಉಳಿಯಬೇಕಾದರೆ ಚಂದಮುತ್ತನು ಶಿಲೆಯಾಗಲೇಬೇಕು. ಹೀಗೆ ಶಿಲೆಯ ಮೂಲಕವೇ 'ಇಡೀ ಕಥಾನಕ 'ಆಗುವ'ಮಾದರಿಯದ್ದು. 'ಹೇಳುವ' ಮಾದರಿಯದ್ದಲ್ಲ. ಈ ಆಗುವಿಕೆಗೆ ಅವಶ್ಯವಾದ ಅನನ್ಯವೆಂಬ ಕಥನ ರೂಪವನ್ನು ಈ ಕೃತಿ ರೂಪಿಸಿಕೊಂಡಿದೆ.''[21]

ಶಿಖರಸೂರ್ಯದ ಕಥಾನಕವು ಕೂಡಾ ಚರಿತ್ರೆ ಪುರಾಣಗಳನ್ನು ಇತಿಹಾಸಕಾರರು ನಿರೂಪಿಸುವುದು ಈ ಮೂಲಕವೇ ವ್ಯಕ್ತಿಯು ನೆಲೆಯಲ್ಲದ್ದನಾಗಿ ಮಾಡಿ ಸಮುದಾಯದ ಕಥೆಯನ್ನು ಹೇಳುತ್ತಿದೆ. ಇಡೀ ಕಾದಂಬರಿಯಲ್ಲಿ ಇತಿಹಾಸಕಾರರೇ ಹೇಳುತ್ತಿದ್ದರೂ ನಿನ್ನಡಿ ಶಿವಾಪುರದ ಬಗ್ಗೆ ಹೇಳುವಾಗ ಮೃದು ಎನಿಸುವ ಧೋರಣೆ ಇದ್ದರೆ ಶಿಖರಸೂರ್ಯನ ಬಗ್ಗೆ ಕನಕಪುರಿಯ ಬಗ್ಗೆ ಹೇಳುವಾಗ ಕಠಿಣವೆಂಬಂತೆ ಕಾಣುತ್ತದೆ. ಆ ಮೂಲಕ ಲೇಖಕರ ಒಲವು ಯಾರ ಪರ ಎಂಬುದನ್ನು ಕಾಣಬಹುದು. ಈ ನಿಲುವಿಗೆ ಕಾರಣವು ಕೂಡಾ

ಕಂಬಾರರೇ ಹೇಳುವ ಹಾಗೆ ''ನನ್ನ ಕಾವ್ಯದಲ್ಲಿ 'ನಾನು' ವ್ಯಕ್ತಿವಿಶಿಷ್ಟ ನೆಲೆಯಲ್ಲಿ ಹೋಗಲು ಸಾಧ್ಯವಿಲ್ಲದಂಥ ಬರವಣಿಗೆ ನನ್ನದು. ಸಮುದಾಯವೆನ್ನುವಲ್ಲಿ ಭಾಗವಾದ ಕಥನಗಳನ್ನು ನಾನು ಹಿಡಿಯಬಲ್ಲೆ''[22] ಮೌಲ್ಯಗಳಲ್ಲಿ ನಂಬಿಕೆ ಇಟ್ಟಿರುವ ಶಿವಾಪುರದ ಬಗ್ಗೆಯೇ ಹೆಚ್ಚು ಒಲವು.

ಚಕೋರಿಯ ಕಥನ ಕ್ರಮವು ಮುಖ್ಯವಾಗಿ ಭೂತ ಮತ್ತು ವರ್ತಮಾನವನ್ನು ಒಳಗೊಂಡಿರುವಂತದ್ದು.' ಶಿವಾಪುರದ 'ಕಲ್ಪನೆಯು ಭೂತವಾದರೂ ಕೂಡಾ ಅದೇ ಮುಖ್ಯ. ಅದನ್ನು ಕೂಡಾ ಇವತ್ತಿನ ಸಂದರ್ಭದಲ್ಲಿ ಹೇಗೆ ಪುನರ್ ಸೃಷ್ಟಿಯಾಗಬೇಕು ಎಂಬುದರ ವಿವರಗಳು ಇದರ ಕಥನ ಕ್ರಮದಲ್ಲಿದೆ. ಚಕೋರಿಯ ಶಿವಾಪುರವು, ಇದು ಒಳಗೊಳ್ಳುವ ವಸ್ತುವು ಆದಿಯದ್ದು. ಅಂದರೆ ಆದಿಕಾಲದ ಜೀವನ ಮೌಲ್ಯಗಳು, ದೇಸೀ ಪದ್ಧತಿಗಳು, ಕೃಷಿ, ಕುಟುಂಬ ಇಂತಹ ನೆಲೆಗಳಿರುವ ವಸ್ತುವನ್ನು ಆಧುನಿಕ ಕಾಲದ ಹಿನ್ನೆಲೆಯಲ್ಲಿ ಪುನರ್‌ರೂಪಿಸಿದ ಕಥೆಯಾಗಿರುವುದನ್ನು ಕಾಣಬಹುದು. ಇದನ್ನು ಹೇಳಲು ಇವತ್ತಿನ ಸಂದರ್ಭದಲ್ಲಿ ಯಾವುದೇ ಒಂದು ಕಥನ ತಂತ್ರ, ಮಾದರಿಯನ್ನು ಪ್ರಕಾರವನ್ನು ಬಳಸಿಕೊಂಡಿಲ್ಲ. ಹಲವು ಬಗೆಯ ಕಥನ ಕ್ರಮಗಳು ಚಕೋರಿಯಲ್ಲಿರುವುದನ್ನು ಕಾಣಬಹುದು. ಈ ಕಾರಣಕ್ಕಾಗಿಯೇ ಕಂಬಾರರು ಭೂತದ ಬಗ್ಗೆ ಹೆಚ್ಚು ಆಸಕ್ತಿವುಳ್ಳವರಾಗುತ್ತಾರೆ ಮತ್ತು ಭೂತವೇ ಮುಖ್ಯ ಎಂದು ಅವರ ನಂಬಿಕೆ. ಈ ಕಾರಣದಿಂದಲೇ ಕಂಬಾರರು ಯಾವಾಗಲೂ ಪರಂಪರೆಯ ಕಡೆಗೆ, ಪರಂಪರೆಯಲ್ಲಿರುವ ಕಥನ ಮಾದರಿಗಳನ್ನು ಆಯ್ಕೆ ಮಾಡಿಕೊಳ್ಳುತ್ತಾರೆ. ವಸ್ತುವು ಹಳೆಯತಾದರೂ ಅದರ ಮೌಲ್ಯಗಳು ಹೊಸತಾಗಿ ಇರುವವು.' ಎಚ್.ಎಸ್. ಶಿವಪ್ರಕಾಶರು ಮುನ್ನುಡಿಯಲ್ಲಿ ಹೇಳಿರುವಂತೆ ''ಚಕೋರಿ ಕೀರ್ತಿಸುವುದು ಕಳೆದುಹೋದ ಜಗತ್ತಿನ ಹಳಸು ಮೌಲ್ಯಗಳನ್ನಲ್ಲ. ನಮ್ಮ ಸಾಮೂಹಿಕ ಪ್ರರ್ಯಾಷ್ಟಕರಲ್ಲಿ ಅಡಗಿರುವ ಇಂದು ನಿಮ್ಮ ವಸ್ತುವಿಗಾಗಿ ನಾವು ಮರು ಸಾಕ್ಷಾತ್ಕಾರಿಸಿಕೊಳ್ಳಲೇಬೇಕಾಗಿರುವ ಇಹಲೋಕ ಪರವಾದ ಶುದ್ದ ಹಾಗೂ ಮುಗ್ಧ ಆರಾಧನಾ ಭಾವವನ್ನು''[23].

ಕೊನೆಟಿಪ್ಪಣಿ


1. ಗಿರಡ್ಡಿ ಗೋವಿಂದರಾಜು, ಕಾದಂಬರಿ ವಸ್ತು ಮತ್ತು ತಂತ್ರ, (ಬೆಂಗಳೂರು, ಬಾಪ್ಕೋ ಪ್ರಕಾಶನ, 1976) ಪುಟ-11.
2. ಅದೇ. ಪುಟ-15.
3. ಕೆ.ಸಿ. ಶಿವಾರೆಡ್ಡಿ, (ಸಂಪಾದಕರು), ಚಕೋರಿ ಒಂದು ಅಧ್ಯಯನ, (ಬೆಂಗಳೂರು, ಸಿ.ವಿ.ಜಿ. ಪಬ್ಲಿಕೇಷನ್. 1998) ಪುಟ-27.
4. ಚಂದ್ರಶೇಖರ ಕಂಬಾರ, ಚಕೋರಿ, ಪುಟ-21.
5. ಕೆ.ಸಿ. ಶಿವಾರೆಡ್ಡಿ, (ಸಂಪಾದಕರು) ಚಕೋರಿ ಒಂದು ಅಧ್ಯಯನ, ಪುಟ-10.
6. ಚಂದ್ರಶೇಖರ ಕಂಬಾರ, ಚಕೋರಿ, ಪುಟ-81.
7. ಕೆ.ಸಿ.ಶಿವಾರೆಡ್ಡಿ (ಸಂಪಾದಕರು) ಚಕೋರಿ ಒಂದು ಅಧ್ಯಯನ, ಪುಟ-61.
8. ಚಂದ್ರಶೇಖರ ಕಂಬಾರ, ಚಕೋರಿ, ಪುಟ-110.
9. ಕೆ.ಸಿ. ಶಿವಾರೆಡ್ಡಿ (ಸಂಪಾದಕರು), ಚಕೋರಿ ಒಂದು ಅಧ್ಯಯನ, ಪುಟ-34.
10. ಅದೇ. ಪುಟ-15
11. ಚಂದ್ರಶೇಖರ ಕಂಬಾರ, ಚಕೋರಿ, ಪುಟ- 171.
12. ಅದೇ ಪುಟ-171.
13. ಕೆ.ಸಿ. ಶಿವಾರೆಡ್ಡಿ (ಸಂಪಾದಕರು) ಚಕೋರಿ ಒಂದು ಅಧ್ಯಯನ, ಪುಟ-15
14. ಚಂದ್ರಶೇಖರ ಕಂಬಾರ, ಶಿಖರಸೂರ್ಯ, ಮುನ್ನುಡಿ
15. ಚಂದ್ರಶೇಖರ ಕಂಬಾರ, ಶಿಖರಸೂರ್ಯ, ಲೇಖಕರ ಮಾತು
16. ಅದೇ ಪುಟ-201.
17. ಅದೇ ಪುಟ-201.
18. ಅದೇ ಪುಟ-302.
19. ಅದೇ. ಮುನ್ನುಡಿ
20. ಹೆಚ್.ಎಸ್. ರಾಘವೇಂದ್ರರಾವ್, ಮಯೂರ ತಿಂಗಳ ಪತ್ರಿಕೆ, ಫೆಬ್ರವರಿ 2008.
21. ಕೆ.ಸಿ. ಶಿವಾರೆಡ್ಡಿ (ಸಂಪಾದಕರು) ಚಕೋರಿ ಒಂದು ಅಧ್ಯಯನ, ಪುಟ-16.
22. ಕಂಬಾರರ ಸಂದರ್ಶನ, ಡಾ. ಬಸವರಾಜ ಕಲ್ಗುಡಿ, ಮಯೂರ ತಿಂಗಳ ಪತ್ರಿಕೆ, ಫೆಬ್ರವರಿ
23. ಚಂದ್ರಶೇಖರ ಕಂಬಾರ, ಚಕೋರಿಯ ಮುನ್ನುಡಿ

# ಅಧ್ಯಾಯ - 3

## ಆಧುನಿಕತೆ ಮತ್ತು ಪರಂಪರೆಗಳ ಮುಖಾಮುಖಿ

'ಕನ್ನಡದ ಕಾದಂಬರಿ, ಕಥೆಗಳಲ್ಲಿನ ವಸ್ತುವನ್ನು ಗಮನಿಸಿದಾಗ ಅದು ಆಧುನಿಕತೆ ಮತ್ತು ಪರಂಪರೆಗಳು ಪರಸ್ಪರ ಎದುರುಗೊಳ್ಳುವುದನ್ನು ಕಾಣಬಹುದು. ಕನ್ನಡದ ಮುಖ್ಯ ಕಾದಂಬರಿಗಳಲ್ಲೂ ಕೂಡಾ ಈ ವಿನ್ಯಾಸವನ್ನು ನೋಡಬಹುದಾಗಿದೆ.' ಪ್ರಸ್ತುತ ಈ ಅಧ್ಯಾಯದಲ್ಲಿ ಕಂಬಾರರ ಈ ಎರಡೂ ಕೃತಿಗಳೂ ಮಂಡಿಸುವ ಆಧುನಿಕತೆ ಮತ್ತು ಪರಂಪರೆಯ ಬೇರೆ ಬೇರೆ ನೆಲೆಗಳನ್ನು ಚರ್ಚೆ ಮಾಡಲಾಗುವುದು. 'ಕಂಬಾರ ಸಾಹಿತ್ಯದಲ್ಲಿನ ವಸ್ತು ಪಾತ್ರಗಳನ್ನು ಗಮನಿಸಿದಾಗ ಹೊರಗಿನ ಶಕ್ತಿಗಳು ಒಂದು ಸಮುದಾಯವನ್ನು ಪ್ರವೇಶಿಸಿದಾಗ ಆಗುವ ವಿಘಟನೆಗಳು, ದುರಂತಗಳನ್ನು ಅನುಭವಿಸುವ ನೆಲೆಗಳನ್ನು ಕಾಣಬಹುದು ಮತ್ತು ಸಮುದಾಯಗಳಲ್ಲಿಯೇ ಇರುವ ದುಷ್ಟಶಕ್ತಿಗಳು, ಕೇಡುಗಳು ಸಮುದಾಯಗಳ ಮೌಲ್ಯ, ಆಚರಣೆಗಳಿಗೆ ಬದ್ಧರಾಗದೇ ಸಮುದಾಯದಿಂದ ದೂರ ಸರಿಯುವುದನ್ನು ಕೂಡಾ ಕಾಣಬಹುದು.' ಕಂಬಾರರು ಒಪ್ಪಿಕೊಳ್ಳುವ ಆಧುನಿಕತೆಯು ಎಂತದ್ದೂ ಮತ್ತು ಅದನ್ನು ಅವರ ಕೃತಿಗಳು ಎದುರುಗೊಳ್ಳುವ ಬಗೆ ಏನು ? ಹಾಗೂ ಸಮುದಾಯಗಳ ಪರಂಪರೆಯ ನಂಬಿಕೆ ಆಚರಣೆಗಳು, ಮೌಲ್ಯಗಳು ಪ್ರತಿಪಾದಿಸುವ ನಿಲುವುಗಳ ಹಿಂದಿರುವ ದರ್ಶನ ಯಾವುದು ಎಂಬುದನ್ನು ಈ ಅಧ್ಯಾಯವು ಚರ್ಚಿಸುತ್ತದೆ.

ಆಧುನಿಕತೆಯು ಶುರುವಾಗುವುದೇ ಪಾಶ್ಚಿಮಾತ್ಯರು ಮಧ್ಯಯುಗವನ್ನು ಪ್ರಾಚೀನ ಯುಗದಿಂದ ಪ್ರತ್ಯೇಕಗೊಳಿಸುವುದರ ಮೂಲಕ, ಆಧುನಿಕತೆಯು ಇಂಗ್ಲೀಷ್‌ನ 'Modern' ಎಂಬ ಶಬ್ಧದಿಂದ ರೂಪುಗೊಂಡದ್ದು ಯುರೋಪಿನಲ್ಲಿ ಆದ ಸಾಮಾಜಿಕ ಬದಲಾವಣೆಗಳು, ಧಾರ್ಮಿಕ ಆಂದೋಲನಗಳನ್ನು ಕುರಿತು ಹೇಳುವ ಸಲುವಾಗಿ ಮತ್ತು ಪಾಶ್ಚಿಮಾತ್ಯರು ನಡೆಸಿದ ಆಕ್ರಮಣಗಳನ್ನು, ಹೊಸ ಹೊಸ ವಿಜ್ಞಾನದ ಅವಿಷ್ಕಾರಗಳ ಸಲುವಾಗಿಯೇ ಆಧುನಿಕತೆಯು ಎಲ್ಲೆಡೆ ಹಬ್ಬತೊಡಗಿತು. 'ಆಧುನಿಕತೆ ಎನ್ನುವುದೇ ಭೂತದೊಂದಿಗಿನ ಜೊತೆಗೆ ಇರುವ ಸಂಬಂಧವನ್ನು ಹೇಳಿಕೊಳ್ಳುವುದರ ಮೂಲಕ ತಾವು ಆ ಭೂತಕ್ಕಿಂತ ಹೇಗೆ ಬೇರೆ ಎಂಬುದನ್ನು ವಿವರಿಸಲು ಸಾಧ್ಯವಾಗತೊಡಗಿತು.' ಆದರೆ ಇದು ನಿರಂತರವಾಗಿ ತನ್ನ ಅಸ್ತಿತ್ವವನ್ನು ವಿಸ್ತಾರಮಾಡತೊಡಗಿತು. ಭಾರತಕ್ಕೆ ಬ್ರಿಟೀಷರು ಬಂದ ನಂತರವೇ ಈಗಾಗಲೇ ಇದ್ದ ಪರಂಪರೆಯ ಜೊತೆ ಸಂಬಂಧವನ್ನು ಕಡಿತಗೊಳಿಸುವ ಸಲುವಾಗಿಯೇ ಅನೇಕ ಹೊಸ ಯೋಜನೆಗಳು ರೂಪುಗೊಂಡವು. ಈ ಯೋಜನೆಗಳ ರೂಪವಾಗಿಯೇ

ಭಾಷೆ, ಧರ್ಮ ಹೊಸಮೌಲ್ಯಗಳು, ಹೊಸ ದರ್ಶನಗಳು ಬಂದಾಗಲೇ 'ಆಧುನಿಕತೆಯ' ನಿಜವಾದ ಸ್ವರೂಪ ತಿಳಿಯತೊಡಗಿತು ಎಂದು ಹೇಳಬಹುದು. ಹೀಗೆ ಆಧುನಿಕತೆಯು ಒಂದು ವರ್ಗವನ್ನು ನಿರ್ದೇಶಿಸುವ, ಬದಲಾಯಿಸುವ ಶಕ್ತಿಯನ್ನು ಪಡೆಯತೊಡಗಿತು. ''ಆಧುನಿಕತೆ ಒಂದು ಬಹುದೊಡ್ಡ ಆಳುವ ವರ್ಗದ ಭಾಷೆಯಾಗಿ ಸಂಕಥನವಾಗಿ ವ್ಯವಸ್ಥೆಯಾಗಿ ಧೋರಣೆಯಾಗಿ ನಿರ್ದೇಶಿಸುವ ಹಾಗೂ ನಿಯಂತ್ರಿಸುವ ಸಾಧನವಾಗಿ ಮಾನವನ ಪ್ರಜ್ಞೆ, ಸಂವೇದನೆಗಳನ್ನು ಬದಲಿಸುವ ನೋಟ ಕ್ರಮವಾಗಿ ರೂಪುಗೊಂಡಿದ್ದು''[1] ಎಂದು ಹೇಳಬಹುದು.

'ಪರಂಪರೆ' ಎಂಬುದು ಸಂಸ್ಕೃತ 'ಪರಂಪರಾ' ಎಂಬ ಶಬ್ಧದಿಂದ ಬಂದಿದೆ. ಪರಂಪರಾ ಎಂಬುದು ಪ್ರಾರಂಭದಿಂದ ಇಂದಿನವರೆಗೆ ನಡೆದುಕೊಂಡು ಬಂದಿರುವ ಆಚರಣೆಗಳು, ನಂಬಿಕೆಗಳನ್ನು ಕುರಿತು ಹೇಳುತ್ತದೆ. ಇಂತಹ ಪರಂಪರೆಯು ರೂಪುಗೊಳ್ಳುವುದೇ ಭೂತಕಾಲದಿಂದಲೂ ಕೂಡಾ ನಡೆದು ಬರುತ್ತಿರುವ ಆಚರಣೆಗಳು, ನಂಬಿಕೆಗಳು, ಐತಿಹ್ಯಗಳು, ಲೋಕದರ್ಶನಗಳು, ಹಿರಿಯರು ರೂಪಿಸಿದ ನಡಾವಳಿಗಳು, ಸಮುದಾಯದ ಒಪ್ಪಿತ ಮೌಲ್ಯಗಳು ಇವತ್ತಿನ ಸಂದರ್ಭದಲ್ಲಿಯೂ ಕೂಡಾ ಹರಿದು ಬರುತ್ತಿರುವುದಾಗಿದೆ. 'ಪರಂಪರೆಯು ಭೂತದೊಂದಿಗಿನ ವರ್ತಮಾನದಲ್ಲಿ ಸಂಬಂಧ ಹೊಂದುವುದು. ಇಂತಹ ಸಂಬಂಧ ಹೊಂದುವಲ್ಲಿ ಎದುರಾಗುವ ಆಧುನಿಕತೆಯ ಬಿಕ್ಕಟ್ಟುಗಳ ಪ್ರಶ್ನೆಗಳು ಕೂಡಾ ಇದನ್ನು ಇನ್ನಷ್ಟು ಜಟಿಲಗೊಳಿಸುತ್ತಿದೆ. ಅಂದರೆ ಈಗಾಗಲೇ ರೂಪುಗೊಂಡಿರುವ ಮೌಲ್ಯಗಳನ್ನು, ಸಾಂಪ್ರದಾಯಿಕ ನಂಬಿಕೆಗಳು, ಜೀವನಕ್ರಮಗಳನ್ನು ನಿರಾಕರಿಸುವ ಅಥವಾ ಅದಕ್ಕೆ ಎದುರಾಗುವ ಇನ್ನೊಂದು ಜೀವನ ಕ್ರಮವು ಸೃಷ್ಠಿಯಾದಾಗ ಪರಂಪರೆಯ ಶಿಥಿಲಗೊಳ್ಳಲು ಶುರುವಾಗುತ್ತಿರುತ್ತದೆ. ಇಂತಹ ಪರಂಪರೆಯಲ್ಲಿ ಸಮುದಾಯವನ್ನು ರಕ್ಷಿಸುವ ಅಥವಾ ಒಪ್ಪಿತವಾದ ಮೌಲ್ಯಗಳಿರುತ್ತವೆ. ದೈವ ಜಗತ್ತಿನ ನಿಯಂತ್ರಣ, ಮಾನವ ಮತ್ತು ತನ್ನ ಸುತ್ತ-ಮುತ್ತಲಿನ ಪರಿಸರ ಜೀವಿಗಳೊಂದಿಗಿನ ಸಂಬಂಧ ಇವೆಲ್ಲವು ಕೂಡಾ ಈಗಾಗಲೇ ನಿರ್ಧಾರವಾಗಿರುತ್ತವೆ. ಅಷ್ಟೇ ಅಲ್ಲದೇ ಸಮುದಾಯವೊಂದು ಉಳಿಯಬೇಕಾಗುವಿಕೆಯಲ್ಲಿ ಕ್ರೂರತೆ, ಬರ್ಬರತೆಗಳೂ ಕೂಡಾ ಪರಂಪರೆಯಲ್ಲಿ ಅಡಗಿರುತ್ತದೆ.'

ಕಂಬಾರರ ಕಾದಂಬರಿಯಾದ 'ಕರಿಮಾಯಿ' ಕಾದಂಬರಿ ಮತ್ತು ಅವರ 'ಹೇಳುತ್ತೇನೆ ಕೇಳಾ' ಕಾವ್ಯಗಳಲ್ಲಿ ಕೂಡಾ ಆಧುನಿಕತೆ ಮತ್ತು ಪರಂಪರೆಯನ್ನು ಮುಖಾಮುಖಿಯಾಗಿಸುವ

ನೆಲೆಗಳಿವೆ. ಕರಿಮಾಯಿ ಕಾದಂಬರಿಯ ಗುಡಸೀಕರ ಹೊಸ ತಲೆಮಾರಿನ ವಿದ್ಯೆಯನ್ನು ಪಡೆದವನು. ಇವನು ಶಿವಾಪುರದ ಬಗ್ಗೆ ತಾಳುವ ನಿರ್ಲಕ್ಷ್ಯವನ್ನು ಕಾಣಬಹುದು. ತಾನು ಮಾಡಲಿರುವ ಪ್ರಗತಿಯ ಬಗ್ಗೆಯೂ ಕೂಡಾ ಶಿವಾಪುರದವರಿಗೆ ಕುತೂಹಲ ಮಾತ್ರವಲ್ಲ, ಅದರಲ್ಲಿ ಭಾಗಿಗಳಾಗುತ್ತಾರೆ. 'ಈ ಕಾದಂಬರಿಯು ಮಂಡಿಸುವ ಪಾರಂಪರಿಕ ಜಗತ್ತಿನ ವಿದ್ಯೆ, ನ್ಯಾಯ ಪದ್ಧತಿ, ಕಲೆ, ಆಟಗಳು, ಹೊಸದಾಗಿ ನಗರದಿಂದ ಪ್ರವೇಶಿಸುವ ಮೌಲ್ಯಗಳಿಂದ ಪಲ್ಲಟಕ್ಕೆ ಒಳಗಾಗುತ್ತವೆ.' ಇದು ಚಕೋರಿ ಮತ್ತು ಶಿಖರ ಸೂರ್ಯ ಕಾದಂಬರಿಗಳಲ್ಲೂ ಮುಂದುವರಿದಿರುವುದನ್ನು ಕಾಣಬಹುದು. ಕಂಬಾರರಿಗೆ ಪರಂಪರೆಯನ್ನು ಉಳಿಸಿಕೊಳ್ಳಬೇಕೆಂಬ ಹಂಬಲ ಅವರು ಬಳಸುವ ಭಾಷೆ ಮತ್ತು ವಸ್ತುವಿನಲ್ಲಿಯೇ ಕಾಣಬಹುದು. ಇದು 'ಹೇಳುತ್ತೇನೆ ಕೇಳಾ'ದಲ್ಲೂ ಕೂಡಾ ಬಂದಿವೆ. ಕುತೂಹಲಕ್ಕಾಗಿ ಈ ಪದ್ಯಗಳನ್ನು ಗಮನಿಸಬಹುದು.

''ಊರೀನ ಹುಡುಗೋರ ದೊಡ್ಡಾಟ ಬಿಟ್ಟುಕೊಟ್ರು
ನಾಟಕವಾಡ್ಯಾರು ಪುಟ್ಟಪೈಲೇಕ
ಹೇಸಿ ಹೆಣ್ಣಿನಾಂಗ ಪುಣ್ಣಾ ತಗದ ಕುಣಿತಾವ
ನೋಡಲಿಲ್ಲ ರಾಮಗೊಂಡ, ಕರಿಮುದುಕ''[2]

ಹೊತ್ತೇರಿ ಎದ್ದ ಗೌಡ ಬಟ್ಟಿಗಿ ಹೂಂಕೊಟ್ಟು
ಕೊಡ್ಯಾವ ಚಾವಡ್ಯಾಗ ದೊಡ್ಡ ಸಭಾ
ಹಸಮಕ್ಕಳಿ ಸಲುವಾಗಿ ಗರಡೀಯ ಮನಿ ಕೆಡವಿ
ಹೊಸ ಸಾಲಿ ಕಟ್ಟಿಸೋಣ - ಬಲೆ ಶೋಬಾ'' [3]

ಮೇಲಿನ ಎರಡೂ ಪದ್ಯಗಳಲ್ಲಿ ಪಾರಂಪರಿಕವಾದ ಕಲೆಯನ್ನು ಬಿಟ್ಟುಕೊಂಡಿದ್ದರ ಬಗ್ಗೆ ತಿರಸ್ಕಾರ ಮನೋಭಾವ, ದೈಹಿಕ ಕಸರತ್ತಿನ ಮತು ವಿದ್ಯೆಯನ್ನು ಹೇಳಿಕೊಡುವಂತ ಗರಡಿ ಮನೆಯನ್ನು ನಾಶಗೊಳಿಸಿ ಹೊಸ ಜ್ಞಾನ ಪಡೆಯುವ ಹಂಬಲ ಇರುವುದನ್ನು ಕಾಣಬಹುದು. ಕಂಬಾರರು ಉತ್ಸಾಹವಿರುವುದೇ ಪಾರಂಪರಿಕ ಜಗತ್ತಿನ ಕಡೆಗೆ ಎಂಬುದು ಈ ಎರಡೂ ಪದ್ಯಗಳು ಸೂಚಿಸುತ್ತವೆ. ಆದರೆ ಇದಕ್ಕಿಂತ ಭಿನ್ನ ರೀತಿಯಲ್ಲಿ ಚಕೋರಿ ಮತ್ತು ಶಿಖರ ಸೂರ್ಯ ಕೃತಿಗಳಲ್ಲಿ ಪಾರಂಪರಿಕ ಜಗತ್ತು ನಿರ್ಮಾಣಗೊಂಡಿರುವುದನ್ನು ಕಾಣಬಹುದು.

ಕಂಬಾರರರ ಯಾವುದೂ ಆಧುನಿಕ ಜಗತ್ತು, ಪಾರಂಪರಿಕ ಜಗತ್ತು ಎಂಬುದನ್ನು ಸರಳವಾಗಿ ನೋಡುವ ಮನೋಭಾವದವರಲ್ಲ. ಯಾವುದನ್ನು ನಾವು ಇವತ್ತು ಆಧುನಿಕತೆ, ಪ್ರಗತಿ, ಅಭಿವೃದ್ಧಿ ವಿಜ್ಞಾನ ತಂತ್ರಜ್ಞಾನ ಎಂದು ಭಾವಿಸುತ್ತೇವೆಯೋ ಆ ಮೌಲ್ಯಗಳು ಕಂಬಾರರ ಒಟ್ಟು ನಿಲುವು ಮತ್ತು ಸಾಹಿತ್ಯ ಕೃತಿಗಳಲ್ಲೂ ಕೂಡಾ ವಿನಾಶದ, ಮನುಷ್ಯ ದುರಂತವನ್ನೇ ಮಂಡಿಸುತ್ತೇವೆ. ನಮಗೆ ಸಂಪ್ರದಾಯವೆನಿಸುವ ಜಗತ್ತುಗಳು ಕಂಬಾರರ ಕೃತಿಯಲ್ಲಿ ಆಧುನಿಕ ರೂಪವಾಗಿ ಹೊಂದಿರುತ್ತವೆ. ಚಕೋರಿ ಕೃತಿಯ ನಿರೂಪಣಾ ಮಾಡುವ ಕ್ರಮದಲ್ಲಿಯೂ ಪಾರಂಪರಿಕ ಜಗತ್ತನ್ನು ಇವತ್ತಿನ ನವ್ಯದ ನಿರೂಪಣಾ ಕ್ರಮದಿಂದ ಭಿನ್ನವಾಗಿ ನೋಡಬಹುದು. ಚಕೋರಿಯು ಅಪ್ಪಟವಾಗಿ ದೇಸಿ ಮೌಲ್ಯಗಳ, ಕೃಷಿ ವಿವರಗಳು, ಕುಲಗಳ ಉಗಮ, ಜಗತ್ತಿನ ಮೂಲ ಕಲೆಗಳ ರೂಪುಗೊಳ್ಳುವಿಕೆ ಇವುಗಳಿಂದ ತುಂಬಿದೆ. ಇಂತಹ ವಸ್ತುವನ್ನು ಆಯ್ಕೆ ಮಾಡಿಕೊಂಡಿರುವುದೇ ಕಂಬಾರರು ತಮಗೆ ಆಧುನಿಕವೆನಿಸುವ 'ಶಿವಾಪುರ'ದ ಕಥೆಯನ್ನು ಹೇಳಹೊರಟಿರುವುದು. ಈ 'ಶಿವಾಪುರ'ದ ಮೂಲ ನೆಲೆಯಿಂದಲೇ ಪಾರಂಪರಿಕ ಜಗತ್ತು ಉಳಿದಿರುವುದು ಮತ್ತು 'ಆಧುನಿಕ'ವೆನಿಸುವ ಜಗತ್ತನ್ನು ನಿರ್ಮಾಣ ಮಾಡುವ ಶಿಖರ ಸೂರ್ಯ ನಂತವರ ಮೂಲ ಕೂಡಾ ಇದೇ ಪಾರಂಪರಿಕ ಜಗತ್ತು.

ಚಕೋರಿಯು ಆದಿಮ ಕಲೆ, ದೇಸಿ, ಜೀವನಾನುಭವಗಳು. ನಂಬಿಕೆ - ಆಚರಣೆಗಳು ದೈವಿಕ ಜಗತ್ತು ಮತ್ತು ಸೃಷ್ಟಿಯಾಗುವ ಮತ್ತು ನಾಶವಾಗುವ ನೆಲೆಗಳು ಈ ಕೃತಿಯ ಉದ್ದಕ್ಕೂ ಕಾಣಬಹುದು. ಇಂತಹ ಜಗತ್ತಿನ ಮೇಲೆ ಎದುರಾಗುವ ಆಕ್ರಮಣದ ವಿವಿಧ ನೆಲೆಗಳನ್ನು ಕೂಡಾ ಗುರುತಿಸಬಹುದು. ನಾಗರೀಕತೆಯ ಕ್ರೌರ್ಯ, ಪರಿಸರದ ಮೇಲಿನ ಆಕ್ರಮಣಶೀಲತೆ, ಬಲ ಸಂಸ್ಕೃತಿ - ಭಾವಸಂಸ್ಕೃತಿಯು ಮುಖಾಮುಖಿಗದಳು ಈ ಕೃತಿಯಲ್ಲಿವೆ. ಹಾಗೆಯೇ ಇಂತಹ ವಿವರಗಳಿಂದಲೇ ಚಕೋರಿಯ ತುಂಬಾ ಮತ್ತೆ ಬಂಧನವಾಗುವ ಮತ್ತು ಬಿಡುಗಡೆಯಾಗುವ ಕಲೆಯ ಮತ್ತು ಕಲಾವಿದನ ವಿವಿಧ ನೆಲೆಗಳನ್ನು ಪ್ರಕಟಗೊಳಿಸುತ್ತದೆ. ಚಕೋರಿಯ ಪ್ರಾರಂಭದಲ್ಲಿಯೇ ಜಗತ್ತು ಸೃಷ್ಠಿಯಾದ ಕತೆಯಲ್ಲಿ ಎರಡು ಭಿನ್ನ ಸಂಸ್ಕೃತಿಗಳ ಮನೋನೆಲೆಗಳು ರೂಪುಗೊಂಡಿರುವುದನ್ನು ಕಾಣಬಹುದು. 'ಅಣ್ಣನೊಮ್ಮೆ ತಮ್ಮನನ್ನು ಹೀಂಕಾರವಾಗಿ ಜರಿದು ಹೆದರಿಸಲು ತನ್ನ ಪಾಲಿನ ಕೊಂಬನ್ನೂದಿದ ನೋಡು : ವಿದಿಕೆಳಗಿಡೋದರೊಳಗೆ ಅದರೊಳಗಿಂದ ಬೆಂಕಿ ಮಾಡಿ, ಮಾಂಸ ಬೇಯಿಸಿ, ತಿನ್ನುವ ಬೇರಿನಿಂದ ವೈದ್ಯ ಮಾಡುವ, ಲೋಹದಿಂದ ಆಯುಧ ಮಾಡುವ, ಆಯುಧಗಳಿಂದ ಯುದ್ದಮಾಡಿ ಗೆಲ್ಲುವ ...ಇತ್ಯಾದಿ ಚೌಸಷ್ಠಿ ವಿದ್ಯೆಗಳು ಸಳಸಳ

ಹುಟ್ಟಿಕೊಂಡವು. ಅಣ್ಣ ಕೇಕೆ ಹಾಕಿ ಕುಣಿದಾಡಿದ. ಇದನ್ನು ನೋಡಿ ತಮ್ಮನೂ ತನ್ನ ಪಾಲಿನ ಕೊಂಬ ಊದಿದಾಗ ಓಂಕಾರನಾದ ಮೊದಲು ಶಬ್ಧ ಕಡೆಯಾಗಿ ಸಂಗೀತ ಸಾಹಿತ್ಯ ಮುಂತಾದ ಇಪ್ಪತ್ತೇಳು ತನ್ನಯ ಕಲೆಗಳು ನೂರೆಂಟು ಕನಸುಗಳಾದ ನಮ್ಮೊಂದಿಗೆ ಹುಟ್ಟಿದವು''[4] ಹೀಗೆ ರೂಪುಗೊಂಡ ಭಿನ್ನ ಸಂಸ್ಕೃತಿಗಳಲ್ಲಿ ಅಣ್ಣನದು ಬೆಂಕಿಯ ಮೂಲಕ ಬೇಯಿಸುವ, ಆಯುಧಗಳಿಂದ ಯುದ್ಧ ಮಾಡಿ ಗೆಲ್ಲುವ ಅಧಿಕಾರದ, ರಾಜಕೀಯ ನೆಲೆಗಳಿಂದ ಕೂಡಿರುವಂತ ಸಂಸ್ಕೃತಿ ಇದು ಪ್ರಭುತ್ವ, ಆಧುನಿಕತೆ, ಏಕರೂಪದ, ಚಿನ್ನ ಸಂಪತ್ತು ಅಧಿಕಾರ ಮುಖ್ಯ ಎಂದು ಭಾವಿಸುವ ವರ್ಗ. ಇದನ್ನು ಚಕೋರಿಯಲ್ಲಿ ಮತ್ತು ಶಿಖರಸೂರ್ಯದಲ್ಲಿ ಬರುವ ಚಂದಮುತ್ತ - ಶಿಖರ ಸೂರ್ಯರನ್ನು ಕಾಣಬಹುದು. ಆದರೆ ಜಗತ್ತಿನ ಅಖಂಡತೆ ಮತ್ತು ಕಲೆಯೇ ಮುಖ್ಯ. ಕಲೆಯ ಮೂಲಕ ಪ್ರೀತಿಗಳಿಸುವ ಸಂಸ್ಕೃತಿಯೊಂದು ರೂಪುಗೊಂಡಿತು. ಇದು ಚಿನ್ನ ಮುತ್ತ - ನಿನ್ನಡಿ - ಲಕ್ಕಬ್ಬೆಯರಲ್ಲಿ ಕಾಣಬಹುದು. ಹೀಗೆ ರೂಪುಗೊಂಡ ಭಿನ್ನ ಸಂಸ್ಕೃತಿಗಳ ನಡುವೆ ನಿರಂತರವಾದ ಸಂಘರ್ಷ ಏರ್ಪಟ್ಟವು. ಕಲೆ-ವಿದ್ಯೆ ಸೇಡ-ಕೇಡಿನ ಮನೋಭಾವ. ನಾಗರೀಕ -ಅನಾಗರೀಕವೆನಿಸುವ ಜಗತ್ತಿನ ಮೌಲ್ಯಗಳು ರೂಪುಗೊಂಡವು.

ಚಂದಮುತ್ತ ಕಲೆಯ ಆರಾಧಕ ಕಲೆಯನ್ನು ಅಹಂಕಾರಗಳಿಲ್ಲದೇ ಒಲಿಸಿಕೊಳ್ಳಬಲ್ಲ ಮತ್ತು ಅದನ್ನು ಮಾನವ ಜಗತ್ತಿನ ಒಳಿತಿಗೆ ಬಳಸುವವನು ತಾನು ಕಲಿತ ಕಲೆಯ ಮೂಲಕವೇ ಸಮುದಾಯದ ಎಲ್ಲರಿಗೂ ಪ್ರಿಯವಾದನು. ಆದರೆ ಚಿನ್ನಮುತ್ತನು ಕಲಿಯುವ ವಿದ್ಯೆಯಿಂದಲೇ ಸೇಡನ್ನು ಪಡೆದುಕೊಂಡವನು. ಕಲೆಯನ್ನು ತನ್ನ ಸ್ವಾರ್ಥಕ್ಕಾಗಿ ಭೋಗದ ವಸ್ತುವನ್ನಾಗಿ ಮಾಡಿಕೊಂಡು ದುರಂತತೆಯ ಕಡೆಗೆ ಹೊರಟವನು. ಇವರಿಬ್ಬರೂ ನಿಲುವುಗಳಲ್ಲಿಯೇ ಚಂದಮುತ್ತ ಪರಂಪರೆಯನ್ನು ಪ್ರತಿನಿಧಿಸಿದರೆ ಚಿನ್ನ ಮುತ್ತು ಆಧುನಿಕತೆಯನ್ನು ಪ್ರತಿನಿಧಿಸುತ್ತಾರೆ. ಚಂದಮುತ್ತನ ಪರಂಪರೆಯು ಅತಿಯಾದ ಕ್ರೌರ್ಯವಿಲ್ಲದ, ಸಂಪ್ರದಾಯವಲ್ಲದ ಮಾನವೀಯ ಮೌಲ್ಯಗಳಿರುವ ನೆಲೆ ಇದನ್ನು ಕೃತಿಯ ಉದ್ದಕ್ಕೂ ಕೂಡಾ ಕಾಣಬಹುದು. ಇಲ್ಲಿ ಎಲ್ಲರೂ ಕೂಡಾ ಸಮಾನರು. ಆದರೆ ಚಿನ್ನಮುತ್ತನ ಆಧುನಿಕತೆಯು ಸ್ವಾರ್ಥಮೂಲದ್ದು. ವಿದ್ಯೆಯ ಮೂಲಕವೇ ಗಳಿಸುವ ಜ್ಞಾನವನ್ನು ಕೇಡಿಗೆ, ಯುದ್ದಕ್ಕೆ , ಬೋಗಿಸುವ ನೆಲೆಗಳನ್ನು ಹೊಂದಿರುವ, ಇದರ ಮೌಲ್ಯಗಳು ಸಮಾಜದ ಮುನ್ನೆಡೆಗೆ ಮಾರಕವಾದದ್ದು. 'ಚಿನ್ನಮುತ್ತನಿಗೆ ತಾನು ಗಳಿಸುವ ವಿದ್ಯೆಯಿಂದ ಹೇಗೆ ಯಕ್ಷಿಯನ್ನು ಪಡೆಯಬಹುದು ಎಂಬುದನ್ನು ಯೋಚಿಸುತ್ತಾನೆ. ಆದರೆ ಚಂದಮುತ್ತ ಯಕ್ಷಿಯನ್ನು ಶಿಲೆಯಿಂದ ಬಿಡುಗಡೆಗೊಳಿಸಿ ಲೋಕಕ್ಕೆ ಸಂಗೀತವಿರುವ ಹಾಗೇ

ಮಾಡಬೇಕೆಂಬ ಹಂಬಲ ಇವರಿಬ್ಬರ ಪ್ರತಿನಿಧಿಸುವಿಕೆಯಲ್ಲಿಯೇ ಕಂಬಾರರು ಈ ಎರಡು ನೆಲೆಗಳಲ್ಲಿ ಯಾವುದೂ ಹೆಚ್ಚು 'ಆಧುನಿಕತೆಗೆ' ಹತ್ತಿರ ಎಂಬುದನ್ನು ಹೇಳಿದಂತಿದೆ.[1]

ಚಕೋರಿಯ ಒಳಗಡೆ ಅನೇಕ ರೀತಿಯಾದ ಪಾರಂಪರಿಕ ನೆಲೆಗಳಿರುವುದನ್ನು ಗುರುತಿಸಬಹುದು. ಶಿವಾಪುರ ಎಂಬ ಹಟ್ಟಿಯ ಅಕ್ಕ-ಪಕ್ಕದಲ್ಲಿಯೇ ಇವರ ಪೂರ್ವಜರ ಲೋಕಗಳು, ದೈವಿಕ ಜಗತ್ತು ಎಲ್ಲವೂ ಸೇರಿಕೊಂಡಿವೆ. ಈ ಲೋಕದ ಜೊತೆಗಿನ ಒಡನಾಟವಿದೆ. ಸಂಬಂಧಗಳು ಏರ್ಪಟ್ಟಿವೆ ಮತ್ತು ಚಂದಮುತ್ತನ 'ಮಳೆರಾಗ'ವನ್ನು ನುಡಿಸಲು ಬೇಕಾಗುವ ಕೊಳಲು ಸಿಗುವುದು ಕೂಡಾ ಇಂತಹ ಲೋಕದಲ್ಲಿಯೇ. ಚಂದಮುತ್ತ ಯಕ್ಷಿಯನ್ನು ಪ್ರೇಮಿಸುವ ಮೂಲಕ ಬೇರೊಂದು ಜಗತ್ತಿನವರೊಡನೆ ಸಂಬಂಧ ಏರ್ಪಟ್ಟಿವೆ. ಇದರ ಮೂಲಕ ಶಿವಾಪುರವು ಕೂಡಾ ಈ ದೇವಿಯ ಒಕ್ಕಲಾದದ್ದನ್ನು ಕಾಣಬಹುದು. ಇಂತಹ ಯಕ್ಷಿಯನ್ನು ತಾನು ಒಲಿಸಿಕೊಳ್ಳಿಲಾರದ ಬಗ್ಗೆ ದ್ವೇಷಾಸೂಯೆಗಳು ಚಿನ್ನಮುತ್ತನ್ನು ಹೆಚ್ಚಾಗಲು ಕಾರಣವಾಗಿವೆ. ಕಲೆಯನ್ನು ತನ್ಮಯವಾಗಿ ಪ್ರೀತಿಯಿಂದ ಆರಾಧಿಸುವ ಚಂದಮುತ್ತನಿಗೆ ಚಕೋರಿ (ಕಲೆಯ) ಒಲಿಯುವುದು ಮುಖ್ಯವೆನಿಸುತ್ತದೆ. ತನ್ನ ಕೊಳಲಿಂದ ನುಡಿಸುವ ಗಾನಕ್ಕೆ ಶಿಲೆಯಾಗಿದ್ದ ಯಕ್ಷಿ ಹೇಳುವ ಮಾತುಗಳವು.

''ನೆಲದಲ್ಲಿ ಕಾಲೂರಿ ಗೊತ್ತಿರದವಳು
ನಾಹ್ಯಾಗೆ ಕುಣಿಯಲಿ ?
ಕುಣಿಯದೇ ಹ್ಯಾಗಿರಲಿ?''[5]

ಇಂತಹ ಕಲೆಯನ್ನು ಕೂಡಾ ವಾಣಿಜ್ಯೀಕರಣಗೊಳಿಸುತ್ತಿರುವ ಈ ಸಂದರ್ಭ ಗಳು, ನಾಶವಾಗುತ್ತಿರುವ ದಿನಗಳಲ್ಲಿ ಚಕೋರಿ ಮಂಡಿಸುವ ಇಂತಹ ಪರಂಪರೆಯ ಮುಖ್ಯವೆನಿಸುತ್ತ ದೆ.

ಚಂದಮುತ್ತ ಪರಿಸೆಯ ಸಂದರ್ಭದಲ್ಲಿ ನುಡಿಸುವ ಕೊಳಲಗಾನವನ್ನು ನಿಲ್ಲಿಸಿ ವಿಕಾರವಾಗಿ ಪ್ರತ್ಯಕ್ಷವಾಗುವ ಮಂದಿಜೋಗ್ತಿಯ ಈ ಮಾತುಗಳು ಇಡೀ ಕೃತಿಯು ಮಂಡಿಸುತ್ತಿರುವ ಆಧುನಿಕತೆಗೆ ಮತ್ತು ವಸಾಹತುಶಾಹಿ ಸಂಸ್ಕೃತಿಯನ್ನು ವಿರೋಧಿಸುವ ನೆಲೆಗಳಿವೆ.

''ನಾಳೆ ಪಶ್ಚಿಮದಿಂದ ಬರುವ ಕಲಿಯುಗಕ್ಕೆ
ತಕ್ಕಡಿಯಲ್ಲಿ ತೂಗಿ ಈ ಸಂಗೀತ
ಮಾರಿಕೋ !''[6]

ಇವತ್ತಿನ ರಾಜಕೀಯ, ಸಾಂಸ್ಕೃತಿಕ, ಸಾಮಾಜಿಕ ಜೀವನವು ಯಾಂತ್ರಿಕವಾದ ಪಶ್ಚಿಮದ ಜೀವನಕ್ರಮವನ್ನು ಅನುಕರಣೆ ಮಾಡುವುದರ ಮೂಲಕವೇ ನಾಶವಾಗುತ್ತಿರುವ ಸಂಗತಿಯನ್ನು ಕಾಣಬಹುದು. ಕಂಬಾರರು ಈ ರೀತಿ ನಾಶವಾಗುತ್ತಿರುವ ಕಲೆ, ಸಂಸ್ಕೃತಿಗಳ ಪುರಾಣವನ್ನು ಮಂಡಿಸುತ್ತಿರುವುದೇ ಆಧುನಿಕ ಜಗತ್ತಿಗೆ ತೋರುತ್ತಿರುವ ವಿರೋಧವಾಗಿವೆ ಮತ್ತು ಆಧುನಿಕತೆಯ ಕಾಲವನ್ನು ಛಿದ್ರಗೊಳಿಸುವುದನ್ನು ಒಪ್ಪದ ನಿಲುವು ಇದೆ. ಈ ಮುದಿಜೋಗ್ತಿಯ ದರ್ಶನವೇ ''ಕಾಲನ ಸೂಳೆ'' ಮತ್ತು ''ಆಕಾಶದ ಬಯಲಿನಲ್ಲಿ ಹುಟ್ಟಿದವಳು''[7] ಕಂಬಾರರೇ ಹೇಳುವ ಹಾಗೆ ಕಾಲವೆನ್ನುವುದು ಭೂತ, ವರ್ತಮಾನ, ಭವಿಷ್ಯತ್‌ಗಳ ಘಟನೆಗಳ ಯೋಜನೆ''[8] ಆದರೆ ಆಧುನಿಕತೆಯು ಇದನ್ನು ಒಪ್ಪದೇ ಪ್ರತ್ಯೇಕವಾಗಿ ನೋಡುತ್ತದೆ. ಇದನ್ನು ನಾವು ಶಿಖರಸೂರ್ಯನಲ್ಲೂ ಕಾಣಬಹುದು.

ಚಕೋರಿಯ 'ಶಿವಾಪುರ'ವು ಯಾವುದೇ 'ಆಧುನಿಕ'ವೆನಿಸುವ ಮೌಲ್ಯಗಳಿಗೆ ಒಳಗಾಗಿಲ್ಲದಿರುವುದನ್ನು ಕಾಣಬಹುದು. ಆದರೆ ಇಂತಹ ಪರಂಪರೆಯಲ್ಲಿಯೇ ಅದನ್ನು ಮೀರುವ ಪ್ರತಿರೋಧಗಳು ಸೃಷ್ಟಿಯಾಗುತ್ತವೆ ಎನ್ನುವುದಕ್ಕೆ ಚಿನ್ನಮುತ್ತನೇ ಸಾಕ್ಷಿ. ಮತ್ತು ಈ ಪ್ರತಿರೋಧದ ಬೇರೆ ಬೇರೆ ನೆಲೆಗಳು ಶಿಖರಸೂರ್ಯದಲ್ಲಿ ವ್ಯಕ್ತವಾಗಿವೆ. ಚಕೋರಿಯ ಶಿವಾಪುರದ ಮೌಲ್ಯಗಳು, ನಂಬಿಕೆಗಳನ್ನು ಪ್ರಶ್ನಿಸದೇ, ಒಪ್ಪುವ ಇದನ್ನು ಪಾಲಿಸುವ ಜನವರ್ಗವಿದೆ. ಆದರೆ ಚಿನ್ನ ಮುತ್ತನಂತವರು, ಮಹಾನುಭಾವರು ಇಲ್ಲಿರುವ ಮೌಲ್ಯಗಳನ್ನೇ ಒಪ್ಪಿಕೊಂಡರೂ ಪರೋಕ್ಷವಾಗಿ ಅದನ್ನು ವಿರೋಧಿಸುವ ಅಥವಾ ಮೀರುವ ಕೇಡಿನ ಸ್ವಭಾವದವರು. 'ಚಂದಮುತ್ತ ತನ್ನ ಕೊಳಲನ್ನು ಪಡೆಯುವುದು ಪೂರ್ವಜರ ಲೋಕದಿಂದ. 'ಆದರೆ ಚಿನ್ನಮುತ್ತ ಅದನ್ನು ಅಧಿಕಾರ, ದರ್ಪದ ಮೂಲಕ ಪಡೆಯಲು ಯತ್ನಿಸುತ್ತಾನೆ.' ಚಂದಮುತ್ತ ತನ್ನ ಲೋಕದಿಂದ ಪಡೆದು ಅದರಿಂದ ಉಂಟಾಗುವ ಸಂತೋಷವನ್ನು ಅನುಭವಿಸುವವನು. ಆದರೆ ಇಂತಹ ಪೂರ್ವಜರ ಲೋಕದ ಅನುಭವ ದಕ್ಕಿಸಿಕೊಳ್ಳಲಾರವರಾಗಿ ಆಧುನಿಕರೆನಿಸುವ ನಾವುಗಳು ಕೂಡಾ ಚಿನ್ನಮುತ್ತನ ಸಾಲಿಗೆ ಸೇರುವವರೇ.

ಕಂಬಾರರು ನಿರ್ಮಿಸಬಯಸುವ ಈ 'ಶಿವಾಪುರ' ಆಧುನಿಕವಲ್ಲದ ಜಗತ್ತು ಆದರೆ ಆಧುನಿಕಕ್ಕೆ ಬೇಕಾಗುವ ಉತ್ತಮವೆನಿಸುವ ಮೌಲ್ಯಗಳು, ದರ್ಶನಗಳು ಇಲ್ಲಿ ಸಿಗುತ್ತವೆ. 'ಕಂಬಾರರು ಈ ರೀತಿಯ ಆಧುನಿಕತೆಯಿಂದ ದೂರವಿರುವ ಜಗತ್ತನ್ನು ಮತ್ತೇ ಮತ್ತೆ ಅವರ ಸಾಹಿತ್ಯದಲ್ಲಿ ಸೃಷ್ಟಿಸುವ ಹಂಬಲವೇ ಆಧುನಿಕತೆಗೆ ಮತ್ತು ವಸಾಹತುಶಾಹಿ ಸಂಸ್ಕೃತಿಗೆ

ತೋರುವ ಪ್ರತಿರೋಧವಾಗಿದೆ. ''ಆಧುನಿಕ ಮೌಲ್ಯಗಳು'' ಉಂಟುಮಾಡುವ ಅಘಾತಗಳ ಪರಿಣಾಮಗಳುನ್ನು ಸಮರ್ಥವಾಗಿ ಎದುರಿಸುವ ಮತ್ತು ತನ್ನ ಅಸ್ತಿತ್ವವನ್ನು ಉಳಿಸಿಕೊಳ್ಳಲೇ ಬೇಕಾದ ಅನಿವಾರ್ಯತೆ ಶಿವಾಪುರಕ್ಕಿದೆ. ಮತ್ತು ಇದು ಕೂಡಾ ವಾಸ್ತವಲ್ಲದ ಜಗತ್ತು ಆಗಿದೆ. ಚಕೋರಿಯ ಈ ಜಗತ್ತು ಅವಾಸ್ತವೆನಿಸಿದರೂ ಅದರ ಮೌಲ್ಯಗಳು, ಅದು ಪ್ರತಿಪಾದಿಸುವ ನೆಲೆಗಳು ವಾಸ್ತವವಾಗಿವೆ. ಚಕೋರಿಯ ತುಂಬೆಲ್ಲಾ ಹೆಚ್ಚು ದೇಸೀಯತೆಯ ವಿವರಗಳೇ ತುಂಬಿವೆ. ಅದಕ್ಕೆ ವಿರುದ್ಧ ಎಂಬಂತೆ ಈಗ ಶುರುವಾಗುತ್ತಿರುವ ಚೆನ್ನಮುತ್ತನ ಸೇಡಿನಿಂದ ರೂಪುಗೊಳ್ಳುತ್ತಿರುವ ವಿದ್ಯೆ ಅದು ಕೂಡಾ ಶಿವಾಪುರದಲ್ಲಿಯೇ. ಇದರ ವಿಸ್ತೃತವಾದ ಚರ್ಚೆಯು ಶಿಖರಸೂರ್ಯ' ಕೃತಿಯಲ್ಲಿ ಸಾಧ್ಯವಾಗಿದೆ.

ಕಂಬಾರರ ಶಿಖರಸೂರ್ಯವು ಅಖಂಡತೆಯನ್ನು ಪ್ರತಿಪಾದಿಸುವ, ಒಂದು ಮತ್ತೊಂದನ್ನು ಒಳಗೊಳ್ಳುವ ಸಾವಯವ ಸಂಬಂಧಗಳಿರುವ ಕೃತಿಯಾಗಿದೆ. ಪ್ರಸ್ತುತ ಈ ಚರ್ಚೆಯ ಕೇಂದ್ರವು ಆಧುನಿಕತೆ ಮತ್ತು ಪರಂಪರೆಗಳ ಮುಖಾಮುಖಿಯು ನೆಲೆಗಳಾಗಿರುವುದರಿಂದ ಕೃತಿಯಲ್ಲಿ ಬರುವ ಮುಖ್ಯ ಪಾತ್ರಗಳ ಧೋರಣೆಗಳು ಮತ್ತು ವಿವರಗಳನ್ನು ಕೇಂದ್ರದಲ್ಲಿರಿಸಿಕೊಂಡಿದೆ. ಕಂಬಾರರ ಕರಿಮಾಯಿ ಕಾದಂಬರಿಯಲ್ಲಿ ಪರಂಪರೆ ಮತ್ತು ಆಧುನಿಕತೆಯ ಪ್ರಶ್ನೆಗಳು ಹೆಚ್ಚಾಗಿ ಕಾಣಸಿಗುತ್ವೆ ಊರಿನ ಗುಡಸೀಕರ ಶಿವಾಪುರದವನಾದರೂ ಕೂಡಾ ಇದನ್ನು 'ಬೆಳಗಾವಿ' ಯಾಗಿಸುವ ಹಂಬಲವುಳ್ಳವನು ಮತ್ತು ಆಧುನಿಕ ನ್ಯಾಯ, ಶಿಕ್ಷಣ ಪದ್ಧತಿಗಳಲ್ಲಿ ನಂಬಿಕೆ ಇಟ್ಟವನು. ಅಂದರೆ ಕಂಬಾರರ ಸಾಹಿತ್ಯವನ್ನು ಗಮನಿಸಿದಾಗ ಅಖಂಡವಾಗಿರುವ ಬದುಕಿನಲ್ಲಿ ಬಿರುಕುಗಳು ವಿಘಟನೆಗಳು ಆಯಾ ಸಮುದಾಯದ ವ್ಯಕ್ತಿಗಳೇ ರೂಪುಗೊಳ್ಳುತ್ತದೆ. ಮತ್ತು ಹೊರಗಿನ ಶಕ್ತಿಗಳಿಂದಲ್ಲ ಎಂಬ ಅಂಶ ಮನವರಿಕೆಯಾಗುತ್ತದೆ. ಇದು ಮುಂದುವರಿದ ಚಕೋರಿ ಮತ್ತು ಶಿಖರ ಸೂರ್ಯಗಳಲ್ಲೂ ಕೂಡಾ ಭಿನ್ನ ನೆಲೆಗಳು, ವೈವಿಧ್ಯತೆಯನ್ನು ಪಡೆದುಕೊಂಡಿವೆ. 'ಶಿಖರಸೂರ್ಯ' ಕೃತಿಯ ಕೇಂದ್ರ ಶಿವಾಪುರ ಮತ್ತು ಕನಕಪುರಗಳೆಂಬ ಹಟ್ಟಿ ಮತ್ತು ನಗರಗಳು. ಈ ಹೆಸರುಗಳು ಕೂಡಾ ಸಾಂಕೇತಿಕವಾದದ್ದು. ಇವುಗಳು ನಿರ್ದಿಷ್ಟರೂಪವನ್ನು ಒಳಗೊಂಡಿರುವ ರೂಪಕಗಳು ಹೌದು. ಪರಸ್ಪರ ಭಿನ್ನ ದಿಕ್ಕುಗಳು ಹಾಗೇ ಕಂಡರೂ ಒಂದು ಮತ್ತೊಂದನ್ನು ಪ್ರಭಾವಿಸಿವೆ. ಶಿವಾಪುರ ಪರಂಪರೆಯ ಪ್ರತಿನಿಧಿಯಂತಿದ್ದರೆ ಕನಕಪುರಿ ಆಧುನಿಕತೆಯ ಮೌಲ್ಯಗಳನ್ನು ಒಳಗೊಂಡದ್ದು ಮತ್ತು ಇಡೀ ಕಾದಂಬರಿಯು ಕೂಡಾ ಪರಂಪರೆ ಮತ್ತು ಆಧುನಿಕ ಮೌಲ್ಯಗಳ ನಡುವೆ ನಡೆಯುತ್ತಿರುವ ಸಂಘರ್ಷದ ಹಾಗೆ ಕಾಣುತ್ತದೆ.

ಶಿಖರಸೂರ್ಯ ಪ್ರಾರಂಭವಾಗುವುದೇ ಶಿವಾಪುರದಿಂದ ಮತ್ತು ಈ ಕಥೆಯ ಪ್ರಾರಂಭದಲ್ಲಿಯೇ ಚಿನ್ನಮುತ್ತನಾಗಿದ್ದವನು ತನ್ನ ಹೆಸರನ್ನು ಬದಲಾಯಿಸಿಕೊಂಡು ''ಅಮ್ಮನ ಗುಡ್ಡನಾಗಿ'' ಮಾರ್ಪಟ್ಟಿರುವುದನ್ನು ಕಾಣಬಹುದು. ಚಕೋರಿಯಲ್ಲಿ ಪಡೆಯಲಾಗದ ವಿದ್ಯೆಯನ್ನು ಪಡೆಯುವ ಸಲುವಾಗಿಯೇ ಶಿವಾಪಾದನಲ್ಲಿ ಶಿಷ್ಯನಾಗುವುದು. ಇಲ್ಲಿಯೇ ಶಿವಾಪುರದ ಮೌಲ್ಯಗಳಿಗೆ ವಿರುದ್ಧವಾದದ್ದನ್ನು ಪಡೆಯುವ ಹಂಬಲಿಸುವ ಕ್ರಿಯೆಗಳೂ ಜಯಸೂರ್ಯನಿಂದ ಪ್ರಾರಂಭವಾಗುವುವು. ಇಲ್ಲಿಂದಲೇ ಜಯಸೂರ್ಯನ ಮಹತ್ವಾಕಾಂಕ್ಷೆ ಆಧುನಿಕ ಜಗತ್ತಿಗೆ ಬೇಕಾದ ವಿದ್ಯೆಯನ್ನು ಯಾರಿಗೂ ಗೊತ್ತಿಲ್ಲದೇ ರೂಡಿಸಿಕೊಳ್ಳುವುದು. ಇಂತಹ ಜಯಸೂರ್ಯ ಶಿಖರ ಸೂರ್ಯನಾಗಿ ಮಾರ್ಪಟ್ಟಾಗ ಶಿವಾಪುರದ ಬಗ್ಗೆ ಇರುವ ಕಲ್ಪನೆಯೇ ಬದಲಾಗುತ್ತದೆ.

ಶಿವಾಪುರದ ಪರಂಪರೆಯ ಬಗ್ಗೆ ಕಾದಂಬರಿಯಲ್ಲಿ ಬರುವ ಮಾತುಗಳನ್ನು ಗಮನಿಸಬಹುದು. 'ಈ ಜನಕ್ಕೆ ಕಾಲ ಅಂದರೆ ಒಂದು ಅಖಂಡ ಘಟಕ. ತಾವು ಬದುಕಿರುವಾಗ ತಮ್ಮೊಂದಿಗೆ ತಮ್ಮ ಹಿಂದಿನ ಎಲ್ಲಾ ಶತಮಾನಗಳ ಅನುಭವಗಳನ್ನು ಇತಿಹಾಸದಲ್ಲಿದ್ದೂ ಬದುಕುತ್ತಾರೆ. ಅಂದರೆ ನೆನಪುಗಳೇ ಇಲ್ಲಿಯ ಕಾಲವನ್ನು ಹಿಂದೆ ಮುಂದೆ ತಳ್ಳುತ್ತದೆ. ಇದನ್ನೇ ಅವರು ಪರಂಪರೆ ಎನ್ನುತ್ತಾರೆ''[9] ಪರಂಪರೆಯ ಬಗ್ಗೆ ಶಿವಾಪುರದವರಿಗೆ ಅವರದೇ ಆದ ಕಲ್ಪನೆಯಿದೆ. ಮತ್ತು ಕಾಲವನ್ನು ವಿಂಗಡಿಸದೇ ಎಲ್ಲ ಕಾಲವು ಅಖಂಡವಾಗಿಯೇ ಕಾಣುತ್ತಾರದ್ದಾರಿಂದ ಅವರಿಗೆ ಪರಂಪರೆಯಾಗಲೀ, ಆಧುನಿಕತೆಯಾಗಲೀ ಬೇರೆ ಬೇರೆಯಲ್ಲ. ಆದರೆ ಕನಕಪುರಿಗೆ ಕಾಲವನ್ನು ವಿಂಗಡಿಸಿ, ಚರಿತ್ರೆಯನ್ನಾಗಿ ಮಾಡುವವರು ಆ ಮೂಲಕ ವರ್ತಮಾನ ಭವಿಷ್ಯತ್‌ಗಳ ಬಗ್ಗೆ ಗಮನಹರಿಸುವಂತವರು. ಕಾದಂಬರಿಯಲ್ಲಿ ವ್ಯಕ್ತವಾಗುವ ಈ ನಿಲುವು ಪರಂಪರೆಯ ಬಗ್ಗೆ ಈಗಾಗಲೇ ಇರುವ ವ್ಯಾಖ್ಯಾನಗಳನ್ನು ನಿರಾಕರಿಸುವಂತದ್ದು. ಶಿವಾಪುರವು ಪಾರಂಪರಿಕವಾದರೂ ಕೂಡಾ ಇಲ್ಲಿನ ಮೌಲ್ಯಗಳ ಬಗ್ಗೆ ಪ್ರೀತಿಯಿದೆ. ಸ್ವತಃ ಅದನ್ನು ಆಧುನಿಕವೆನಿಸುವ ಶಿಖರಸೂರ್ಯನೂ ಒಪ್ಪುತ್ತಾನೆ. ಕನಕಪುರಿಯ ಕುಟಿಲ ರಾಜಕೀಯಗಳು, ಅಗಾಧವಾದ ಚಿನ್ನ, ಸಂಪತ್ತು, ಅಧಿಕಾರ, ಯುದ್ಧಸೈನ್ಯ ಎಲ್ಲವೂ ಇದ್ದಾಗಲೂ ಕೂಡಾ ಭೋಗದ ನಗರವಾದ ಕನಕಪುರಿಯು ಕೂಡಾ ಹೀನವಾದದ್ದು ಮತ್ತು ನರಕ ಸಮಾನ ಎಂಬುದು ಈ ಮಾತುಗಳಿಂದ ತಿಳಿಯುತ್ತದೆ. ''ವಸ್ತುಗಳಿಗೆ ನಿಜವಾದ ಬೆಲೆ ಇರೋದು ನಿನ್ನ ಶಿವಾಪುರದಲ್ಲಿ ಈಗಲೂ ಇಲ್ಲಿ ಚಿನ್ನ ಅಂದರೆ ಒಂದು ಲೋಹ ಮಾತ್ರ. ಎಂಥಾ ಭಾಗ್ಯವಂತರು ನೀವು. ಅದೇ ಕನಕಪುರಿಯಲ್ಲಿ ನೋಡು ಒಂದು ಚಿನ್ನದ ಹಣಕ್ಕೆ ಒಂದು ಚೀಲ ಭತ್ತ. ಐವತ್ತಾರು ದೇಶಗಳಿಗೆ ಕನಸಿನ

ಪುರವಾದ ಕನಕಪುರಿ ನನಗೆ ನರಕವಯ್ಯ ಹುಟ್ಟಿನಿಂದ ನಾನು ಕಂಡ ಕನಸು ನನ್ನೆದುರು ಸಿಕ್ಕಿವೆ. ಈವರೆಗೆ ಎಲ್ಲೆಲ್ಲೂ ಇದೆ ಅಂತ ಹಾರೈಸಿ ಹುಡುಕಿದೆ. ಇಲ್ಲಿರೋದು ತಿಳಿಯದೆ ಈಗ ಅದು ನನ್ನ ಅಂಗೈನಲ್ಲೇ ಇದೆ. ಶಿವಾಪುರ ನನ್ನ ಹೊಸ ರಾಜಧಾನಿ.''[10] ಶಿಖರಸೂರ್ಯನ ಈ ಮಾತುಗಳು ಶಿವಾಪುರದ ಇಡೀ ಬೆಟ್ಟವೇ ಚಿನ್ನ ಎಂಬುದನ್ನು ಅರಿತು ಆಡುತ್ತಿರುವಂತದ್ದು. ಆದರೆ ಆ ಚಿನ್ನ ಯಾವುದು ಎಂಬ ಪರಿಜ್ಞಾನವಿಲ್ಲದವನು. ಇಲ್ಲಿ ಬೆಟ್ಟ ಎಂಬುದೇ ಅಮೂಲ್ಯವಾದ ನಿಧಿ. ಇದು ನಲವತ್ತು ಹ ಟ್ಟಿಗಳು ನಿಯಂತ್ರಿಸುವ, ಪ್ರಭಾವಿಸುವ ನೆಲೆಯಾಗಿದೆ. ಇಂತಹ ಮೌಲ್ಯಗಳಿಗೆ ಸಂಪೂರ್ಣ ವಿರುದ್ಧವಾದ ಯುದ್ಧ, ಅಧಿಕಾರ, ಸಂಪತ್ತುಗಳನ್ನು ಮುಖ್ಯ ಎಂದು ಭಾವಿಸುವ ನೆಲೆಯಾಗಿದೆ.

ಕಂಬಾರರೇ ಹೇಳುವ ಹಾಗೆ ''ಆಧುನಿಕವಲ್ಲದ ಹಿಂದಿನ ಯಾವುದಾದರೂ ಕಾಲಮಾನದಲ್ಲಿ ನಡೆದಿದ್ದು ಎಂದು ಭಾವಿಸಬೇಕು''[11] ಎಂದು ಹೇಳಿದ್ದರೂ ಇವತ್ತಿನ ಸಂದರ್ಭದ ಭಿನ್ನ ಜೀವನವಿಧಾನಗಳನ್ನು ಭಿನ್ನ ಮೌಲ್ಯಗಳನ್ನು ಪ್ರತಿಪಾದಿಸುತ್ತದೆ. ಕನಕಪುರಿಯು ಮತ್ತು ಶಿವಾಪುರಗಳೆರಡೂ ಇವತ್ತಿನ ನೆಲೆಯಲ್ಲಿ ನೋಡಿದಾಗ ಕನಕಪುರಿಯ ಮೌಲ್ಯಗಳನ್ನು ಒಪ್ಪಿತರಾಗಿದ್ದೇವೆ . ಆದರೆ ಶಿವಾಪುರದ ಮೌಲ್ಯಗಳು ಹೆಚ್ಚು ಮುಖ್ಯ ಮತ್ತು ಪ್ರಸ್ತುತ ಎಂಬುದು ವ್ಯಕ್ತವಾಗುತ್ತದೆ. ಹೊಸ ನಾಗರೀಕತೆಯ ಪ್ರವೇಶದಿಂದಾಗುವ ದುರಂತವನ್ನು ಕೂಡಾ ಈ ಕೆಳಗಿನ ಮಾತುಗಳಿಂದ ಗ್ರಹಿಸಬಹುದು. ''ಇಡೀ ಪ್ರಪಂಚ ಕನಕಪುರಿಯೆಂಬ ನಗರವಾಗಿ ಹೊಸ ನಾಗರೀಕತೆಯೊಂದು ಹುಟ್ಟುತ್ತಿರುವ ದರ್ಶನ ನಿನಗಾಗುತ್ತಿಲ್ಲವೇ ? ಇತಿಹಾಸದ ಹಳೇ ಚಕ್ರ ತನ್ನೊಂದು ಸುತ್ತು ಮುಗಿಸಿಯಾಯ್ತು ಮಾರಆಯಾ, ಈಗ ಶುರುವಾಗಿರೋದು ಹೊಸ ಸುತ್ತು. ಹೊಸ ಒತ್ತಡಗಳಿಂದ ಉಂಟಾಗುತ್ತಿರುವ ಹೊಸದೊಂದು ನಾಗರೀಕತೆಯ ಪ್ರಾರಂಭ ಕಾಣಿಸುತ್ತಿಲ್ಲವೇ ? ''[12] ಬ್ರಿಟೀಷರು ಬಂದು ಅನೇಕ ಪಲ್ಲಟಗಳು ಉಂಟಾದ ನಂತರ ಇಲ್ಲಿನ ಸ್ಥಳೀಯ ಬದುಕುಗಳು ಹೊಸದೊಂದನ್ನು ಸ್ವೀಕರಿಸಿ ಒಗ್ಗಿಕೊಳ್ಳುವ ಮೊದಲೇ ನವ ವಸಾಹತುಶಾಹಿಯ ಆಕ್ರಮಣ ಮಾಡಿರುವುದನ್ನು ಕಾಣಬಹುದು. ಜಾಗತೀಕರಣದ ಭರಾಟೆಯಲ್ಲಿ ಎಲ್ಲವು ಕೂಡಾ ಹಣದ ಜಗತ್ತಿನ ಬೆನ್ನತ್ತಿರುವುದುನ್ನು ಕಾಣಬಹುದು. ಇಂತಹ ನಾಗರೀಕತೆಯು ಕೇವಲ ಬದಲಾವಣೆಯಲ್ಲ. ''ಹೊಸ ನಾಗರೀಕತೆಯಲ್ಲಿ ಎಲ್ಲವು ಸ್ಥಳ ಬದಲಿಸುತ್ತವೆ. ಧರ್ಮಗಳು, ರಾಜರು, ಕಳ್ಳರು, ದೇವರು, ಸ್ವರ್ಗನರಕಗಳು, ಪ್ರೇಮ, ಪ್ರೀತಿ, ಶಿಕ್ಷಣ, ಎಲ್ಲಾ ಎಲ್ಲವೂ ಸ್ಥಳ ಬದಲಾಯಿಸುತ್ತವೆ.''[13] ಸಮಗ್ರವಾದ ಪಲ್ಲಟಗಳು ಅಸ್ತಿತ್ವವನ್ನೇ ಬದಲಾಯಿಸುವಷ್ಟು ಶಕ್ತಿಶಾಲಿಗಳಾಗಿರುತ್ತವೆ. ಇಂತಹ ಆಧುನಿಕ ನಾಗರೀಕತೆಯೂ ಪ್ರವೃತ್ತಿಗೆ ವಿರುದ್ಧವಾದದ್ದು

ಶಿವಾಪುರ ಮತ್ತು ಕನಕಪುರಿಯನ್ನು ಎಲ್ಲಾ ರೀತಿಯಲ್ಲೂ ಇಂದಿನ ನವವಸಾಹತುಶಾಹಿಯು 'ರೂಪಕ'ವನ್ನಾಗಿ ಗ್ರಹಿಸಬಹುದಾಗಿದೆ.

ಕೃತಿಯ ಉದ್ದಕ್ಕೂ ಕೂಡಾ ಶಿವಾಪುರ ಮತು ಕನಕಪುರಿಯ ಮೌಲ್ಯಗಳು ನಿರಂತರವಾಗಿ ಘರ್ಷಿಸುತ್ತಿವೆ. ಕನಕಪುರಿ ಕಾಳು ಮತ್ತು ಹುಲ್ಲನ್ನು ಚಿನ್ನ ಮತ್ತು ಸೈನಿಕರಾಗಿ ಪರಿವರ್ತಿಸಿದರೆ ಮತ್ತೆ ಅದನ್ನು ಮೂಲಸ್ಥಿತಿಗೆ ತರುವ ಕಲೆ ಶಿವಾಪುರದ್ದು. ಇಂತಹ ಕೃತಕವಾದ ಚಿನ್ನ ಮತ್ತು ಸೈನಿಕರ ಬಗ್ಗೆ ಉತ್ಸಾಹದಿಂದ ಇರುವ ಕನಕಪುರಿಯ ಶಿಖರಸೂರ್ಯ ಅಧಿಕಾರ, ಕ್ರೌರ್ಯ, ದ್ವೇಷಗಳನ್ನು ಹೆಚ್ಚಿಸಿಕೊಳ್ಳುತ್ತಾನೆ. ಚಿನ್ನದ ಬಗ್ಗೆ ಶಿವಾಪುರದವರಿಗೆ ದಿವ್ಯ ನಿರ್ಲಕ್ಷ್ಯ ಮತ್ತು ಅದನ್ನು ಮತ್ತೆ ಮೂಲಸ್ಥಿತಿಗೆ ತರುವ ಆ ಮೂಲಕ ಮನುಷ್ಯನಿಗೆ ಬೇಕಾದ ಆಹಾರವೇ ಮುಖ್ಯ ಎಂಬ ನಿಲುವನ್ನು ತಲುಪುತ್ತಾರೆ. ಶಿವಾಪಾದ ಹೇಳುವ ಮಾತುಗಳು ಉಲ್ಲೇಖಾರ್ಹ. ''ಹತ್ತಿಯಿಂದ ಬಟ್ಟೆ ಮಾಡಿ, ಬಟ್ಟೆಯಿಂದ ಹತ್ತಿ ಮಾಡಲಾರದ ಸಂಸ್ಕೃತಿ ವಿನಾಶದತ್ತ ಸರಿಯುತ್ತದೆ''[14] ಈ ಮಾತುಗಳನ್ನು ಉದ್ಧರಿಸುವುದು ಮಹಾರಾಣಿ. ಬ್ರಿಟೀಷರ ಭಾರತದಲ್ಲಿನ ಸಂಪತ್ತನ್ನು ದೋಚಿ, ಕೈಗಾರಿಕಾ ವಸಾಹತುವನ್ನಾಗಿ ಮಾಡಿಕೊಂಡು ಇಲ್ಲಿನ ಹತ್ತಿಯಿಂದ ಬಟ್ಟೆಯನ್ನು ತಯಾರಿಸಿ ಸ್ಥಳೀಯವಾದ ನೆಲೆಗಳನ್ನು ಸಂಸ್ಕೃತಿಗಳನ್ನು ನಾಶ ಮಾಡಿರುವುದನ್ನು ಕಾಣಬಹುದು. ಕಂಬಾರರ ಈ ನಿಲುವು ಕೂಡಾ ಬ್ರಿಟೀಷ್ ವಸಾಹತುಶಾಯನ್ನು ವಿರೋಧಿಸುವ ನೆಲೆಯಿರುವುದನ್ನು ಕಾಣಬಹುದು. ಮತ್ತು ಆಧುನಿಕ ನವವಸಾಹತುಶಾಹಿಗಳು ಕೂಡಾ ಎಲ್ಲವನ್ನು ಯಾಂತ್ರಿಕತೆಯ ಮೂಲಕ ಸ್ಥಳೀಯ ಕೈಗಾರಿಕೆಗಳನ್ನು ನಾಶ ಮಾಡಿರುವುದನ್ನು ಕಾಣಬಹುದು.

ಶಿಖರಸೂರ್ಯನ ಮಗನಾದ ರವಿಕೀರ್ತಿಯು ಆಧುನಿಕತೆಯ ಕಡೆ ಮುಖ ಮಾಡಿದಂತೆ ಕಂಡರೂ ಅವನ ಒಟ್ಟು ನಿಲುವು ಪರಂಪರೆಯ ಕಡೆಗೆ. ತನ್ನ ತಂದೆಯ ಅಧಿಕಾರ ಸಂಪತ್ತು ಕ್ರೌರ್ಯಗಳನ್ನು ನಿರಾಕರಿಸುವ ರವಿಕೀರ್ತಿಯು ಆಧುನಿಕತೆಗೆ ವಿರೋಧವನ್ನು ವ್ಯಕ್ತಪಡಿಸುವುದನ್ನು ಕಾಣಬಹುದು. ಕಂಚಿಯಲ್ಲಿ ತಾನು ಕಲಿಯುತ್ತಿರುವ ವಿದ್ಯೆಯ ಮೂಲಕವೇ ಪ್ರೀತಿ-ವಿಶ್ವಾಸಗಳನ್ನು ಪಡೆಯುತ್ತಿರುವವನು ಇವನ ಸಹಪಾಠಿ ರಾಜನಾದ ಶ್ವೇತಕೀರ್ತಿಯ ಜೊತೆಗಿನ ಸಂಭಾಷಣೆಗಳಲ್ಲಿ ಇದನ್ನು ಗಮನಿಸಬಹುದು. ''ನಿಮಗೆ ನಿತ್ಯಬದಲಾವಣೆ ಬೇಕು. ಅದಕ್ಕಾಗಿ ಸಾಹಸ ಬೇಕು. ಯುದ್ಧ, ಪ್ರಾಣಿಬೇಟೆ, ಸ್ತ್ರೀ ಬೇಟೆ, ಜೂಜು, ಅಧಿಕಾರ ಇವೆಲ್ಲ ಬೇಕು. ಇವುಗಳಾಚೆ ನಿಮಗೆ ಜೀವನವಿಲ್ಲ. ಅವರಿಗಾದರೆ ಅವರ ಬದುಕಿಗೆ ಇನ್ನೊಂದು ಆಯಾಮವಿದೆ. ಕ್ಷಿತಿಜಾಚೆಗಿನ ಆ ಭಯ, ಆ ಬೆರಗು

ಇಲ್ಲಿಯದನ್ನು ಕಣ್ಣು ತೆರೆದು ನೋಡುವುದಕ್ಕೆ ಪ್ರೇರಿಸುತ್ತದೆ. ಒಂದು ಮರದಂತೆ ಇನ್ನೊಂದಿಲ್ಲ. ಒಂದು ಸೂರ್ಯೋದಯ ಸೂರ್ಯಾಸ್ತದಂತೆ ಇನ್ನೊಂದಿಲ್ಲ. ಒಂದು ಎಲೆಯಂತೆ ಇನ್ನೊಂದಿಲ್ಲ. ಒಂದು ದಿನದಂತೆ ಇನ್ನೊಂದಿಲ್ಲ. ಈ ವೈವಿಧ್ಯ ಈ ಜೀವನ ಪ್ರೀತಿ ನಮಗೆ ಅಗೋಚರ''[15] ರವಿಕೀರ್ತಿ ಕನಕಪುರಿ ಮತ್ತು ಶಿವಾಪುರದ ಬಗ್ಗೆ ಆಡುವ ಮಾತುಗಳಿವು. ಪ್ರತಿ ನಿತ್ಯವು ನಿರಂತರ ಬದಲಾಗುವ, ಅಧಿಕಾರದ, ಯುದ್ಧ ಮೋಜು-ಭೋಗದ ಜೀವನವನ್ನೇ ಆಧುನಿಕತೆ ಎಂದು ನಂಬಿರುವ ಕನಕಪುರಿಯ ಮೌಲ್ಯಗಳಿಗೆ ವಿರುದ್ಧವಾಗಿ ಶಿವಾಪುರವಿದೆ. ಇಲ್ಲಿ ನಿರಂತರ ಚಲನಶೀಲತೆ, ವೈವಿಧ್ಯತೆಗಳು, ಜೀವನಸ್ಥಿತಿಯು ಶಿವಾಪುರದ ಮುಖ್ಯ ಧಾತುಗಳು. ಇವುಗಳ ಮುಖಾಮುಖಿಯಲ್ಲಿ ಅಂತಿಮವಾಗಿ ಒಪ್ಪಿತಬೇಕಾಗಿರುವ ಮೌಲ್ಯಗಳು ಶಿವಾಪುರದವೇ ಆಗಿವೆ. ಶಿವಾಪುರದ ಪರಂಪರೆಯ ಮೌಲ್ಯಗಳು ಶಿವಾಪುರದವೇ ಆಗಿವೆ. ಶಿವಾಪುರದ ಪರಂಪರೆಯಲ್ಲೇ ಬಂದ ಶಿಖರಸೂರ್ಯನ ಅದನ್ನು ನಿರಾಕರಿಸಿ ಆಧುನಿಕತೆಯನ್ನು ಅಪ್ಪಿಕೊಂಡರು ಇವನ ಮಗ ಇದನ್ನೇ ನಿರಾಕರಿಸುವ ನೆಲೆಯು ಕಾದಂಬರಿಯಲ್ಲಿದೆ. ಆಧುನಿಕತೆಯು ತರುವ ಬದಲಾವಣೆಗಳು ಜೀವನ ವಿಮುಖವಾಗಿರುವುದನ್ನು ಕೂಡಾ ಕಾದಂಬರಿಯು ತುಂಬ ಇವೆ.'' ಯುದ್ಧಗಳು, ಸ್ಪರ್ಧೆಗಳು, ದಾಳಿಗಳು, ಶೋಧನೆಗಳು, ಸಾಹಸಗಳು, ಅಧಿಕಾರದಗ ದಾಹಗಳು, ಇವೆಲ್ಲ ಏನು? ಬದಲಾವಣೆಗಳನ್ನು ಪ್ರಚೋದಿಸುತ್ತವೆ. ಇದನ್ನೇ ನೀವು ಪ್ರಗತಿ ಎನ್ನುತ್ತೀರಿ. ಇಂಥ ಯಾವ ಬದಲಾವಣೆಗಳು ಕಾಡಿಗೆ ಬೇಕಿಲ್ಲ. ಅಲ್ಲವೇ ? ಅದು ಯುದ್ಧ ವಿರೋಧಿಯಾದ ಮಾತ್ರ ಸಂಸ್ಕೃತಿ''[16] ಕನಕಪುರಿಯು ಕೂಡಾ ಈ ರೀತಿಯ ಯುದ್ಧಗಳನ್ನು ನಿರಂತರವಾಗಿಯೇ ಮಾಡಿ ಸಂಪತ್ತುಗಳಿಸುವ ಕ್ರೂರತೆಯನ್ನು ಪಡೆದಿರುವುದೇ ಆಧುನಿಕತೆಯೇ ? ಎಂಬ ಪ್ರಶ್ನೆ ಏಳುತ್ತದೆ. ಇಂತಹದ್ದಕ್ಕೆ ಸಂಪೂರ್ಣವಾಗಿ ವಿರುದ್ಧವಾಗಿರುವ ಶಿವಾಪುರದ ಮೌಲ್ಯಗಳು ಪರಂಪರೆ, ಸಂಪ್ರದಾಯ ಬದ್ಧವಾದವು ಎಂದು ಹೇಳಲು ಸಾಧ್ಯವಾಗುವುದಿಲ್ಲ.

ಶಿವಾಪುರ ಮತ್ತು ಕನಕಪುರಿಯ ಈ ಮೌಲ್ಯಗಳೇ ಯಾವುವು ವರ್ತಮಾನಕ್ಕೆ ಹೆಚ್ಚು ಪ್ರಸ್ತುತವಾಗುತ್ತವೆಂಬುದನ್ನು ತಿಳಿಯಬಹುದು. ಇವತ್ತಿನ ಜಗತ್ತಿನ ಯುದ್ಧದಾಹ, ಆಕ್ರಮಣಗಳ, ಭೋಗ, ದುರಾಸೆಗಳನ್ನು ಕನಕಪುರಿಯ ಮೌಲ್ಯಗಳು ಪ್ರತಿನಿಧಿಸುತ್ತವೆ. ಆದರೆ ಆಧುನಿಕವಲ್ಲದ ಶಿವಾಪುರದ ಕಲ್ಪನೆ ಮತ್ತು ಅದು ಪ್ರತಿಪಾದಿಸುವ ಮೌಲ್ಯಗಳು ಇವತ್ತಿನ ಸಂದರ್ಭದಲ್ಲಿ ಹೆಚ್ಚು ಮಾನವೀಯವೆನಿಸುತ್ತದೆ. ಆಧುನಿಕವಾಗಿ ಮುಂದುವರಿದ ದೇಶಗಳು ಪ್ರತಿಪಾದಿಸುವ ಇಂತಹ ಅಧಿಕಾರ ದಾಹ, ಕ್ರೂರತೆಗಳು ಕನಕಪುರಿಯನ್ನೇ

ಮತ್ತೆ ಮತ್ತೆ ನೆನಪಿಸುತ್ತವೆ. ''ನಿಮ್ಮದು ಸ್ಪರ್ಧೆಯಿರುವ ಅಧಿಕಾರದಾಹಿಯಾದ ಪಿತೃಸಂಸ್ಕೃತಿ. ಇದಕ್ಕೆ ಸ್ಪರ್ಧೆ ಬೇಕು. ಯುದ್ಧ ಮಾಡಿ ನನ್ನ ಅಧಿಕಾರ ಕಸಿದುಕೋ ಅನ್ನುತ್ತಾನೆ ತಂದೆ. ಮಾತೃ ಸಂಸ್ಕೃತಿ ಹಾಗಲ, ಅದಕ್ಕೆ ಶಾಂತಿ ಬೇಕು. ಮೌಲ್ಯಗಳು ಬೇಕು ನೆನಪು ಬೇಕು. ನಿಮಗೆ ಚರಿತ್ರೆ ಬೇಕು ಚರಿತ್ರೆಗೆ ನೆನಪುಗಳಿಲ್ಲ. ಅದಕ್ಕೆ ಮತ್ತೆ ಮತ್ತೆ ಅವೇ ತಪ್ಪುಗಳನ್ನು ಮಾಡುತ್ತದೆ. ಅವೇ ಯುದ್ಧ ಮಾಡುತ್ತವೆ. ಮಾತೃ ಸಂಸ್ಕೃತಿಗೆ ಇತಿಹಾಸ ಬೇಡ. ಆದ್ದರಿಂದ ಯುದ್ಧ ಬೇಡ. ಗಂಡ ಮಗ ಇಬ್ಬರೂ ಬದುಕಬೇಕು ಅನ್ನುತ್ತಾಳೆ ತಾಯಿ'' [17]

ಇಂತಹ ಆಧುನಿಕತೆಯು ತರುವ ಕ್ರೂರತೆ ಮತ್ತು ಪಲ್ಲಟಗಳು ಕೇವಲ ವ್ಯಕ್ತಿಯ ನೆಲೆಯಲ್ಲಿ ಅಷ್ಟೇ ಅಲ್ಲದೆ ಇಡೀ ಸಮುದಾಯವನ್ನೇ ಬದಲಾಯಿಸಲು ಹಂಬಲಿಸುತ್ತಿರುತ್ತೆ. ಕಂಬಾರರು ಈ ಕೃತಿಗಳು ಮಂಡಿಸುವ ಆಧುನಿಕತೆಯು ಕನಕಪುರಿಯಂತ ನಗರವನ್ನು ನಾಶಮಾಡುತ್ತದೆ ಹೊರತು ಶಿವಾಪುರವನಲ್ಲ. ವಸಾಹತುಶಾಹಿಯು ಇಂತಹ ನೆಲೆಗಳು ಹಳ್ಳಿಗಳನ್ನು ತಲುಪಲು ಕೂಡಾ ಸಮಯ ಹಿಡಿಯುತ್ತದೆಂಬುದನ್ನು ಹೇಳುತ್ತದೆ. ಮತ್ತು ಕಂಬಾರರ ಈ 'ಶಿವಾಪುರ' ಎಂತಹ ಆಕ್ರಮಣದ ನೆಲೆಗಳಿಂದಲೂ ಕೂಡಾ ತನ್ನನ್ನು ತಾನು ರಕ್ಷಿಸುವಂತಹ ಶಕ್ತಿ ಚೈತನ್ಯಗಳು ಇದಕ್ಕಿದೆ. ಅಷ್ಟೇ ಅಲ್ಲದೇ ತನ್ನ ಅಂತಸತ್ವದಿಂದಲೇ ಕನಕಪುರಿಯನ್ನು ಕೂಡಾ ಪರಿವರ್ತಿಸುವ ಹಂಬಲ ಉಳ್ಳದ್ದು'' ಶಿವಾಪುರ ಗಟ್ಟಿ ಇದ್ದರ ಇರಲಿ ಕನಕಪುರಿ ಬಿದ್ದರೂ ಕಟ್ಟು. ಜಗತ್ತೆಲ್ಲಾ ಶಿವಾಪುರ ಅಂತ ಕಟ್ಟಿ ಬೇಕಪಾ ಮಗನ ..ಅಂತಾಳ ತಾಯಿ. ಅದು ನಂದೆಲ್ಲ ಆದನ್ಯಾಕ ಕಟ್ಟಬೇಕಂತ ವಿಚಾರ ಮಾಡಬಾರದು. ಎಲ್ಲಿ ಏನೂ ಕಟ್ಟಿದರೂ ಶಿವಾಪುರವೆಂದೂ ಕಟ್ಟು ಕಟ್ಟು. ಕಟ್ಟಿದ್ದೆಲ್ಲಾ ಶಿವಾಪುರವೆಂದು ಕಟ್ಟು''18 ಶಿವಪಾದನ ಈ ಮಾತುಗಳು ಆಧುನಿಕತೆಯ ಸಂಕೇತವಾದ ಕನಕಪುರಿಯನ್ನು ನಾಶಗೊಳ್ಳುವಂತದ್ದು. ಅದನ್ನು ಶಿವಾಪುರದ ಮೌಲ್ಯಗಳ ಆದಾರದ ಮೇಲೆ ಮತ್ತೆ ನಿರ್ಮಾಣ ಮಾಡಬೇಕೆಂಬ ಹಂಬಲ ಶಿವಾಪುರದ್ದು. ಈ ಶಿವಾಪುರ ಶಾಶ್ವತವೂ ಅಲ್ಲ. ಇದರ ಮೌಲ್ಯಗಳು ಕೂಡಾ ನಿರಂತರ. ಬದಲಾಗುವಂತದ್ದು. ಪರಂಪರೆಯೆನಿಸುವ ಇಂತಹ ಶಿವಾಪುರಕ್ಕೆ ಮೌಲ್ಯಗಳು ಸರ್ವಕಾಲಿಕವಾದವುಗಳು. ಇಂತಹ ಶಿವಾಪುರದ ಕಲ್ಪನೆಯು ಕೂಡಾ ಮಹಾಮನೆಯನ್ನು ನೆನಪಿಗೆ ತರುತ್ತದೆ. ಶಿವಾಪುರ ಕೂಡಾ ಜಂಗಮಸ್ವರೂಪವಾಗಿರುವುದನ್ನು ಕಾಣಬಹುದು. ಮಗನೇ ಶಿವಾಪುರವನ್ನು ನಾವ್ಯಾಕೆ ಕಟ್ಟಿದಿವಿ? ಅದು ಶಾಶ್ವತವಾಗಿ ಇರಲಿ ಅಂತಲ ? ಆಕಾರಗೊಂಡುದಕ್ಕೆಲ್ಲಾ ಅಳಿವಿರುವಾಗ ಶಿವಾಪುರವಷ್ಟೇ ಶಾಶ್ವತವಾಗಿ ಹೆಂಗುಳದೀತು ? ನಾವೆಲ್ಲಾ ಶಿವಾಪುರ ಶಿವಾಪುರ ಅಂತ ಬಡಕೊಂಡದ್ದು ಒಂದು ದಿನ ಅದು ಮಣ್ಣಾಗೋದೇ? ಸ್ವಂತ ಅಮ್ಮನೇ ತನ್ನ ಹೆಸರು ತಾನೇ ಬದಲಿಸಿಕೊಂಡು

ಇನ್ನೊಂದಾಗ್ತಾಳಂತೆ. ಇನ್ನು ಶಿವಾಪುರದ ಬಿಟ್ಟಾಳೆಯೇ [19] ಕಂಬಾರರಿಗೆ ಶಿವಾಪುರವು ಕೂಡಾ ಅಳಿದುಹೋಗುವಂತದ್ದೇ ಎಂಬ ವಾಸ್ತವತೆ ಇದೆ. ಮತ್ತು ಎಲ್ಲವೂ ಕೂಡಾ ಜಂಗಮ ಸ್ಥಿತಿಯನ್ನು ಪ್ರತಿಪಾದಿಸುವ ನೆಲೆಯು ಶಿವಾಪುರದ್ದು. ಯಾವುದೂ ಕೂಡಾ ಸ್ಥಿರವಲ್ಲ ಎಂಬ ದರ್ಶನ ಕಂಬಾರರಿಗೆ ಮಾತ್ರ ಸಾಧ್ಯವಾದದ್ದು.

ಆಧುನಿಕತೆಯ ಪ್ರ ತಿನಿಧಿಯಾದ ಕನಕಪುರಿಯು ರಾಜಕೀಯ ಕುಟಿಲತೆಗಳು ಯುದ್ಧನೀತಿಗಳು ನವ ವಸಾಹತುಶಾಹಿಯಾದ ಅಮೇರಿಕಾದ ಯುದ್ಧನೀತಿಯು ಹಾಗೆ ಕಾಣುತ್ತದೆ. ಇಂತಹ ಆಧುನಿಕ ಮೌಲ್ಯಗಳ ದೃಷ್ಟಿಯಲ್ಲಿ ಶಿವಾಪುರವು ಕೂಡಾ ಹೀನಾಯವಾಗಿಯೇ ಕಾಣುತ್ತದೆ. ಮತ್ತು ಇದನ್ನು ಚಿನ್ನಮುತ್ತು ಅಧಿಕಾರದಿಂದ ಕಾಣುವ ನೆಲೆಯು ಕೂಡಾ ಇದೆ. ''ಶಿವಪುರ ಅಂದರೆ ಏನು ಅಂತ ಗೊತ್ತಾಯಿತು ಅದೊಂದು ಕಗ್ಗಾಡು'' ಮಾತಾಡುವ ಪ್ರಾಣಿಗಳಿಂದ ತುಂಬಿದ ಕಣ್ಣಾಡು ಹಗಲು ಕೂಡಿದ ಸೂರ್ಯನ ಬಿಸಿಲು ಬೀಳದ ಕಣ್ಣಾಡು. ಆ ಕಗ್ಗಾಡಿನಲ್ಲಿ ಸೂರ್ಯನ ಕಿರಣಗಳು ಪ್ರವೇಶಿಸುವಂತೆ ಮಾಡಿ ಕತ್ತಲನ್ನು ಓಡಿಸುವುದು ನಮ್ಮ ಧರ್ಮದ ಉದ್ದೇಶ. ಕತ್ತಲೆಯ ಕಗ್ಗಾಡಿನಲ್ಲಿ ಬೆಳಕಿನ ಹೊಸ ಧರ್ಮ ಸಾಮ್ರಾಜ್ಯ ಸ್ಥಾಪನೆಯೇ ನಮ್ಮ ಗುರಿ.''[20] ಶಿಖರಸೂರ್ಯನು ಆಡುವ ಈ ಮಾತುಗಳು ಶಿವಾಪುರವನ್ನೇ ತನ್ನ ಅಧಿಕಾರ ಮತ್ತು ಚಿನ್ನದಿಂದ ಪರಿವರ್ತಿಸುವ ಮನೋಭಾವವಿದೆ. ಮತ್ತು ಅಧಿಕಾರ ಮತ್ತು ಚಿನ್ನದಿಂದ ಎಲ್ಲವನ್ನೂ ಬದಲಾವಣೆ ಮಾಡಬಹುದು ಎಂಬ ನಂಬಿಕೆ. ಶಿವಾಪುರದ ವಿಷಯದಲ್ಲಿ ಸುಳ್ಳಾಗಿದೆ. ಆದರೆ ಇಂತಹ ಚಿನ್ನ ಮತ್ತು ಅಧಿಕಾರದಿಂದ ಶಾಶ್ವತವಾಗಿ ಸಾಮ್ರಾಜ್ಯ ಕಟ್ಟಬಯಸಿದ ಕನಕಪುರಿ ರೋಗಕ್ಕೆ ತುತ್ತಾಗುವ ದುರಂತತೆಯನ್ನು ಕಾದಂಬರಿಯು ವಿಷಾದವಾಗಿ ಚಿತ್ರಿಸಿದೆ. ನಿನ್ನಡಿ-ಕುರುಮುನಿಯರು ಮತ್ತೆ ಇದನ್ನು ನಿರ್ಮಾಣ ಮಾಡಬೇಕೆಂಬ ಹಂಬಲ ಅಧಿಕಾರಕ್ಕಾಗಿಯಲ್ಲ. ಕನಕಪುರಿಯಲ್ಲಿ 'ಗರುಡನಾಗಿ' ಮಾಯವಾದ ಶಿಖರ ಸೂರ್ಯನಂತಹವರು ಮತ್ತೆ ಆಕ್ರಮಣ ಮಾಡಬಹುದೆಂಬುದನ್ನು ಕಾದಂಬರಿ ಸೂಚ್ಯವಾಗಿ ಸೂಚಿಸುತ್ತಿದೆ.

ಶಿಖರಸೂರ್ಯ ಕೃತಿಯು ಪ್ರತಿಪಾದಿಸುವ ಆಧುನಿಕತೆಯು ಕೇವಲ ಬದಲಾವಣೆ ಮಾಡುವಂತದ್ದಲ್ಲ. ಇದು ಎಲ್ಲವನ್ನು ಕೂಡಾ ವಿನಾಶದ ಕಡೆಗೆ ಚಲಿಸುತ್ತದೆ ಎಂಬುದನ್ನು ಹೇಳುತ್ತಿದೆ. ತಂತ್ರಜ್ಞಾನ - ವಿಜ್ಞಾನಗಳು, ಯಾಂತ್ರಿಕತೆಯು ನೆಲೆಯಂತಿರುವ ಕನಕಪುರಿಯು ಇಡೀ ಕನಕಪುರಿಯನ್ನೇ ನಾಶಮಾಡುತ್ತಿದೆ. '' ಆತ ನಿನ್ನ ಆತ್ಮದೊಳಗಿನ ಅಮ್ಮನನ್ನು ಕಿತ್ತು

ಹಾಕೋದಿಲ್ಲಪ್ಪ.........ನಿನ್ನ ಆತ್ಮವನ್ನೇ ಕೊಂಡು ಬಿಡ್ತಾನವನು ಅವಾಗೇನು ಮಾಡ್ತಿ ? ನಿನಗಿನ್ನೂ ಈ ಕತೆ ಗೊತ್ತಿಲ್ಲ. ಕನಕಪುರಿಯ ರಾಜ ಬಂದು ಯಾವುದೋ ಹಳ್ಳಿಯ ಪೂಜಾರಿಗೆ ಅದೇನೋ ರಸ ಕುಡಿಸಿದನಂತಪ. ನಮ್ಮ ಗೊಳಬಾರಸ ಇರುತ್ತಲ್ಲ ಹಾಗಿತ್ತಂತೆ ಅದು. ಪೂಜಾರಿ ಕುಡಿದ -ಕುಡಿದ ಕುಡಿದ ಕೂಡಲೇ ಹದ್ದಾಗಿ ಹಾರಬೇಕಂತ ಆಸೆ ಆಯ್ತು ! ಹಾರಬೇಕಂತ ಕೈ ಬೀಸಿದರೆ ಅವನ ಕೈಗೆ ಹದ್ದಿನ ರಕ್ಕೆ ಪುಕ್ಕ ಮೂಡಿವೆ. ಮೂಗು ಹದ್ದಿನ ಚುಂಚಿನ ಹಾಗೆ ಬಿರುಸಾಗಿದೆ.''[21] ಆ ವಸಾಹತುಶಾಹಿ ಮತ್ತು ಅದರ ರೂಪವಾದ ಆಧುನಿಕತೆಯು ಸಂಪೂರ್ಣವಾಗಿ ನಾಶಮಾಡುವ ಸ್ಥಿತಿಯನ್ನು ಸೂಚಿಸುತ್ತದೆ. ಆಕ್ರಮಣಕ್ಕೆ ಒಳಗಾದವನು ಮನಸ್ಸನ್ನೇ ನಾಶಮಾಡುವ ಇಲ್ಲವೇ ಬದಲಾಯಿಸುವ ಶಕ್ತಿ ಅದಕ್ಕಿದೆ. ಆದುನಿಕತೆಯು ಕಂಬಾರರ ದೃಷ್ಟಿಯಲ್ಲಿ ಕೇವಲ ಬದಲಾವಣೆಷ್ಟೇ ಅಲ್ಲ. ''ಹೊಸ ನಾಗರೀಕತೆಯಲ್ಲಿ ಎಲ್ಲವೂ ಸ್ಥಳವನ್ನು ಬದಲಿಸುತ್ತದೆ. ಧರ್ಮಗಳು ರಾಜರು, ಕಳ್ಳರು, ದೇವರು, ಸ್ವರ್ಗನರಕಗಳು, ಪ್ರೇಮ, ಶಿಕ್ಷಣ, ಎಲ್ಲಾ ಎಲ್ಲವೂ ಸ್ಥಳ ಬದಲಾಯಿಸುತ್ತದೆ.''[22] ಕಂಬಾರರು ಇಂತಹ ಬದಲಾವಣೆಗಳಿಗೆ ಒಳಗಾಗದ ಒಂದು ಮಿಥ್‌ನ್ನು ರೂಪಕವನ್ನಾಗಿ ಶಿವಾಪುರವನ್ನು ಸೃಷ್ಟಿಸಿದ್ದಾರೆ. ಈ ಮೂಲಕ ಆಧುನಿಕತೆಯನ್ನು ಎದುರಿಸಲು ಬೇಕಾದ ಸಮರ್ಥತೆ , ಚೈತನ್ಯ ಈ ಶಿವಾಪುರಕ್ಕಿದೆ.

ಕಂಬಾರರು ಚಕೋರಿ ಕೃತಿಯಲ್ಲಿ ಬಾಹ್ಯ ಶಕ್ತಿಗಳು ಪ್ರವೇಶವಿರದೇ ಸಮುದಾಯದ ಆಂತರಿಕದಲ್ಲೇ ಬಿರುಕುಗಳು ವಿಘಟನೆಗಳಾಗುವುದನ್ನು ಕಾಣಬಹುದು. ಇದು ಆದಿಮದ ಸ್ಥಿತಿಯಾದ್ದರಿಂದ ಹೆಚ್ಚು ಆಧುನಿಕತೆಯನ್ನು ಒಳಗೊಂಡಿಲ್ಲವೆಂದು ಹೇಳಬಹುದು. ಆದರೆ ಆಧುನಿಕತೆಯ ಮೂಲ ಸೃಷ್ಟಿಯಾಗುವುದೂ ಕೂಡಾ ಇಲ್ಲಿಂದಲೇ ಎಂಬುದು ಗಮನಾರ್ಹ. ಶಿಖರ ಸೂರ್ಯದಲ್ಲಿ ಇದು ಮುಂದುವರಿದು ಶಿವಾಪುರಕ್ಕೆ ಸಂಪೂರ್ಣವಾಗಿ ವಿರುದ್ಧವಾದ ಕನಕಪುರಿಯನ್ನು ಸೃಷ್ಟಿಸಿದ್ದಾರೆ. ''ಅಂದಿಗೆ ಹಳೆಯದಾದರೂ ಇಂದಿಗೆ ಎಳೆಯ''ವಾಗಿರುವ ಪ್ರಸ್ತುತವೆನಿಸುವ ಎರಡು ನೆಲೆಗಳು ಇಲ್ಲಿವೆ. ಮುನ್ನುಡಿಯಲ್ಲಿ ಎಚ್.ಎಸ್. ಶಿವಪ್ರಕಾಶರು ಹೇಳುವ ಹಾಗೆ ''ಇಂದಿನ ಗೊಳೀಕೃತ ಜಗತ್ತಿನ ಒಣಜಗತ್ತುಗಳನ್ನು ತಂತ್ರಜ್ಞಾನದ ಠೇಂಕಾರಗಳನ್ನು ಈ ಮೃತ್ಯುವಿನ ಸ್ಥಿತಿಯಲ್ಲಡಗಿರುವ ಮರುಹುಟ್ಟಿನ ಅಸೀಮ ಸಾಧ್ಯತೆಗಳನ್ನು ಇಷ್ಟು ಸಮಗ್ರವಾಗಿ ಹಿಡಿದಿಡುವ ಕೃತಿಗಳು ನನಗೆ ಗೊತ್ತಿದ್ದ ಮಟ್ಟಿಗೆ ಇವತ್ತಿನ ಸಾಹಿತ್ಯದಲ್ಲಿ ವಿರಳ.''[23] ಕಂಬಾರರ ಈ ಕೃತಿಗಳ ಮೂಲಕ ಆಧುನಿಕತೆಯು ಕೇವಲ ಪಶ್ಚಿಮದಿಂದ ಬಂದದ್ದಲ್ಲ. ಅದು ಎಲ್ಲಾ ನಾಗರೀಕತೆಗಳಲ್ಲೂ ಕೂಡಾ ಇರುವಂತದ್ದು ಎಂಬುದನ್ನು

ಗುರುತಿಸಬಹುದು. ಇದರ ಮೂಲಕ ಪಶ್ಚಿಮ ನಾಗರೀಕತೆ ಆಮದು ಮಾಡಿಕೊಳ್ಳಲು ಸಾಧ್ಯವಿಲ್ಲವೆನ್ನುವುದನ್ನು ಕಾಣಬಹುದು. ಕಾದಂಬರಿಯ ಕೊನೆಯಲ್ಲಿ ಬರುವ ಒಂದು ಕಾಲಾಗ ತಕ್ಕಡಿ, ಒಂದು ಕಾಲಾಗ ಕತ್ತಿ ಹಿಡಿದುಕೊಂಡು ಬಂದು ಬೆಟ್ಟದ ಮೇಲೆ ಕುಳಿತುಕೊಂಡು ಹಟ್ಟಿಯ ಕಡೆ ನೋಡುವ 'ರಣಹದ್ದು' ವಿನ ರೂಪಕ ಅಮೇರಿಕಾದ ಸಾಮ್ರಾಜ್ಯಶಾಹಿಯನ್ನು ನೆನಪಿಸುವಂತಿದೆ. ಆದರೆ ಇದು ಸಾರ್ವತ್ರಿಕತೆಯನ್ನು ಕೂಡಾ ಪಡೆದುಕೊಂಡಿದೆ. ಕಂಬಾರರು ಶಿವಾಪುರದ ಬಗ್ಗೆಯೇ ಹೆಚ್ಚು ಅಭಿಮಾನ ಪ್ರೀತಿಗಳಿರುವುದರಿಂದ ಸಹಜವಾಗಿಯೇ ಈ ಮೌಲ್ಯಗಳನ್ನು ಹೆಚ್ಚು ಪ್ರಸ್ತುತ ಎಂಬುದನ್ನು ಕೂಡಾ ತಿಳಿಯಬಹುದು.

ಕೊನೆಟಿಪ್ಪಣಿ

1. ಡಾ. ನಟರಾಜ ಹುಳಿಯಾರ್, ಆಫ್ರಿಕನ್ ಹಾಗೂ ಕನ್ನಡ ಸಾಹಿತ್ಯಗಳಲ್ಲಿ ಆಧುನಿಕತೆ ಮತ್ತು ಪರಂಪರೆ, ಪುಟ-133.
2. ಚಂದ್ರಶೇಖರ ಕಂಬಾರ, ಹೇಳುತೇನ ಕೇಳ, ಪುಟ-39.
3. ಚಂದ್ರಶೇಖರ ಕಂಬಾರ, ಪುಟ - 41.
4. ಚಂದ್ರಶೇಖರ ಕಂಬಾರ, ಚಕೋರಿ, ಪುಟ-21.
5. ಅದೇ ಪುಟ- 42.
6. ಅದೇ ಪುಟ-51.
7. ಅದೇಪುಟ-51.
8. ಚಂದ್ರಶೇಖರ ಕಂಬಾರ, ದೇಶೀಯ ಚಿಂತನೆ, ಪುಟ-135.
9. ಚಂದ್ರಶೇಖರ ಕಂಬಾರ, ಶಿಖರಸೂರ್ಯ, ಪುಟ-201.
10. ಅದೇ ಪುಟ-378.
11. ಅದೇ ಮುನ್ನುಡಿ
12. ಅದೇ ಪುಟ-65.
13. ಅದೇ ಪುಟ - 65.
14. ಅದೇಪುಟ-273.
15. ಅದೇ ಪುಟ-214.
16. ಅದೇಪುಟ-214
17. ಅದೇಪುಟ-215.
18. ಅದೇಪುಟ-354.
19. ಅದೇಪುಟ-352
20. ಅದೇಪುಟ-373
21. ಅದೇಪುಟ-381
22. ಅದೇ ಪುಟ-65

# ಅಧ್ಯಾಯ - 4

## ಪುರಾಣಗಳು ಮತ್ತು ಅನಾಧುನಿಕ ಜಗತ್ತು ಪುನರ್ ಸೃಷ್ಠಿಯಾಗುವ ನೆಲೆಗಳು

ಕನ್ನಡ ಸಾಹಿತ್ಯಿಕ ಪರಂಪರೆಯಲ್ಲಿ ಜಾನಪದ ಕತೆಗಳ ಎಳೆಯನ್ನು, ಪುರಾಣಗಳನ್ನು, ಮಿಥ್‌ಗಳನ್ನು ತಮ್ಮ ಸಾಹಿತ್ಯಿಕ ಕೃತಿಗಳಲ್ಲಿ ಬಳಸಿಕೊಂಡವರು ವಿರಳ. ಮನುಷ್ಯನ ಆದಿಮರ ರೂಪಗಳಾದ ಕನಸುಗಳು, ಸ್ವರ್ಗ-ನರಕಗಳ, ಆತ್ಮ-ದೇಹದ ದ್ವಂದ್ವತೆಗಳು ದೈವ ಜಗತ್ತಿನ ಬೇರೆ ಬೇರೆ ಮೂಲಗಳನ್ನು, ಎಳೆಗಳನ್ನು ಬಳಸಿಕೊಂಡು ವರ್ತಮಾನದಲ್ಲಿನ ಸಂದರ್ಭಗಳನ್ನು ಹೇಳುವ ಕ್ರಮ ಕೂಡಾ ಮುಖ್ಯವಾದದ್ದು. ಕನ್ನಡದಲ್ಲಿರುವ ಜಾನಪದ ಕಥನ ಕ್ರಮ ವಸ್ತು ತಂತ್ರ ನಿರೂಪಣೆಗಳು ಪ್ರಕಾರಗಳನ್ನು ಆಧುನಿಕ ಸಾಹಿತ್ಯವು ಅಷ್ಟಾಗಿ ಬಳಸಿಕೊಂಡಿಲ್ಲವೆಂದೇ ಹೇಳಬಹುದು. ಪಾರಂಪರಿಕ ಜಗತ್ತು ಎಂದೂ ನಿರ್ಲಕ್ಷ್ಯಕ್ಕೆ ಈಡು ಮಾಡುವ ಆಧುನಿಕ ಸಾಹಿತಿಗಳ ಮನೋಭಾವ ಎಲ್ಲವನ್ನೂ ಕೂಡಾ ಪಶ್ಚಿಮದಿಂದಲೇ ಪಡೆಯಬೇಕೆಂಬ ಹಂಬಲವಿರುವುದನ್ನು ಅವರ ಕೃತಿಗಳಲ್ಲಿ ಕಾಣಬಹುದು. ಆಧುನಿಕ ಕನ್ನಡದ ನವೋದಯ ಪ್ರಗತಿಶೀಲ ನವ್ಯ, ದಲಿತ ಬಂಡಾಯ ಕಾಲಘಟ್ಟಗಳೆಲ್ಲಿ ತನ್ನದೇ ಆದ ದೇಸಿ ಪರಂಪರೆಯ ಜೊತೆಗಿನ ಅನುಸಂಧಾನ ನಡೆದಿರುವುದು ಹೆಚ್ಚಾಗಿ ಕಾಣುವುದಿಲ್ಲ. ಬೇಂದ್ರೆಯವರ ಕಾವ್ಯವು ಇದಕ್ಕೆ ಹೊರತಾಗಿರುವುದನ್ನು ಕಾಣಬಹುದು. ಅಂದರೆ ಈಗಾಗಲೇ ಇರುವ ಕನ್ನಡದ್ದೇ ಆದ ಜಾನಪದ ಜಗತ್ತಿನೊಡನೆ ಅನಾಧುನಿಕವೆನಿಸುವ ಲೋಕದ ಜೊತೆಗಿನ ಸಂಬಂಧಗಳು ಇಲ್ಲವೆನ್ನಿಸುವಷ್ಟರ ಮಟ್ಟಿಗೆ ಕನ್ನಡ ಸಾಹಿತ್ಯವು ಇದೆ.

ಕಂಬಾರರು ತಮ ಎಲ್ಲಾ ಸಾಹಿತ್ಯಿಕ ಕೃತಿಗಳ ಮೂಲಗಳನ್ನು ಜಾನಪದೀಯ ಜಗತ್ತಿನಿಂದಲೇ ಪಡೆದುಕೊಂಡವರು. ಪುರಾಣಗಳು ಮತ್ತು ನಂಬಿಕೆಗಳ ನೆಲೆಯಿಂದಲೇ ಬಂದವು. ದೈವಿಕ ಜಗತ್ತಿನೊಡಗಿನ ಸಂಬಂಧಗಳನ್ನು ಕೂಡಾ ಏರ್ಪಡಿಸಬಲ್ಲದು. ಪಶ್ಚಿಮದ ಮಾಂತ್ರಿಕವೆನಿಸುವ ಜಗತ್ತು ಕಂಬಾರರಿಗೆ ಮಾಂತ್ರಿಕವೇ ಅಲ್ಲ. ಅದೊಂದು ನಿತ್ಯ ಜಗತ್ತಿನ ವ್ಯವಹಾರ. ಈ ವ್ಯವಹಾರಗಳು ಜಗತ್ತಿನ ಸಕಲ ಲೋಕಗಳನ್ನು ಒಳಗೊಳ್ಳುವಂತದ್ದು. ದೈವಲೋಕ, ಪೂರ್ವಜರ ಲೋಕ, ಎಲ್ಲವನ್ನೂ ಕೂಡಾ ಇಲ್ಲಿಯೇ ಸಾಕ್ಷಾತ್ಕರಿಸಿಕೊಳ್ಳಬಲ್ಲರು. ಇಂತಹ ಭಿನ್ನ ಭಿನ್ನ ನೆಲೆಗಳು ಕಂಬಾರರ ಒಟ್ಟು ಸಾಹಿತ್ಯಿಕ ನೆಲೆಯಲ್ಲಿ ರೂಪುಗೊಂಡಿದೆ. ಇಂತಹ ಹಿನ್ನೆಲೆಯ ಕಂಬಾರರ ಮೂಲ ಸೆಲೆಯ ಕೂಡಾ ಸಾವಳಗಿ ಶಿವನಿಂಗ, ಪಾರಂಬ ಕರ್ರೆವ್ವ, ಅಲ್ಲಮಪ್ರಭುಗಳು, ಸಿದ್ಧರಾಮ ಸ್ವಾಮಿಗಳು, ಶಿವಾಪುರವೇ ಆಗಿದೆ. ಅಲ್ಲಿಂದಲೇ ಚಲಿಸುವ ಇವರ ಸಾಹಿತ್ಯ ಎಲ್ಲಾ ಕಡೆಗಳಲ್ಲಿಯೂ ಹಬ್ಬಬಲ್ಲದು.

ಕಂಬಾರರ ಸರೀಕ ಲೇಖಕರಲ್ಲಿ ಜಾನಪದೀಯ ಜಗತ್ತಿನಿಂದ, ಇತಿಹಾಸದಿಂದ ಆಕರ್ಷಿತರಾಗಿ ಸಾಹಿತ್ಯ ಕೃತಿಗಳನ್ನು ರಚನೆ ಮಾಡಿದವರು ಕಡಿಮೆ. ಲಂಕೇಶ, ತೇಜಸ್ವಿ, ಅನಂತಮೂರ್ತಿ, ಇವರೆಲ್ಲಾ ಆಧುನಿಕ ಲೋಕದ ಬೆರಗನ್ನು, ಮನುಷ್ಯನ ವ್ಯಗ್ರತೆ, ಸಿಟ್ಟನ್ನು, ಪರಂಪರೆಯ ವಿಮರ್ಶೆಯನ್ನು ಕೂಡಾ ಮಾಡಿದವರು. ಆದರೆ ಗಿರೀಶ್ ಕಾರ್ನಾಡರು ಬರೆದಿರುವ ಯಯಾತಿ, ಹಯವದನ, ನಾಗಮಂಡಲ, ನಾಟಕಗಳಲ್ಲಿ ಪುರಾಣದ ಜಗತ್ತಿನ ಮನುಷ್ಯನ ಆದಿಮ ಬಯಕೆಯ ಸ್ವರೂಪದ ನೆಲೆಗಳನ್ನು ಆಧುನಿಕ ಜಗತ್ತಿನೊಂದಿಗೆ ಸಂವಾದಿಯಾಗಿಸುತ್ತಾರೆ. ಕಂಬಾರರ ಕೃತಿಗಳು ಜಗತ್ತು ಒಳಗೊಳ್ಳುವುದು ಶಿವಾಪುರವನ್ನೇ. ಕಂಬಾರರ ಮೂಲಸೆಲೆಯೆಲ್ಲವೂ ಕೂಡಾ ಕಥನ ಮಾದರಿಯದ್ದು. ಇಂತಹ ಮಾದರಿಗಳನ್ನು ಪಡೆದುಕೊಂಡದ್ದು ಕೂಡಾ ಪುರಾಣದ ಜಗತ್ತೇ ಅಥವಾ ದೈವ ಜಗತ್ತಿನಿಂದ ಜಾನಪದ ಜಗತ್ತು, ಚರಿತ್ರೆ, ಪುರಾಣಗಳು, ಮಿಥ್‌ಗಳನ್ನು ವಾಸ್ತವತಾ ಮಾರ್ಗವನ್ನು ಮೀರಿದ್ದು ಎಲ್ಲವೂ ಕೂಡಾ ಕಂಬಾರರಲ್ಲಿ ಬೇರೆ ಬೇರೆ ಸ್ವರೂಪ ಪಡೆಯುತ್ತದೆ. ಅಥವಾ ಹೊಸ ರೀತಿಯ ನವಪುರಾಣಗಳಾಗಿ, ಮಿಥ್‌ಗಳಾಗಿ ರೂಪುಗೊಳ್ಳುತ್ತದೆ. ಇಂತಹ ಜಾನಪದ ಬಗ್ಗೆ ಕಂಬಾರರು ಹೇಳುವ ಮಾತುಗಳು ಗಮನಾರ್ಹ. ''ಜಾನಪದವೆಂಬುದು ಒಂದು ಸಂಸ್ಕೃತಿಯು ಮುಗಿದು ಪೂರ್ತಿಯಾದ ಅವಸ್ಥೆಯಲ್ಲಿ ಜೀವಂತವಾಗಿರುವ ಅವಸ್ಥೆ. ಒಬ್ಬ ಜಾನಪದ ಕಲಾವಿದ ಹಾಡು ಹೇಳುತ್ತಿದ್ದಾನೆಂದರೆ ಏಕಕಾಲದಲ್ಲಿ ಆತ ಎರಡು ಕೆಲಸ ಮಾಡುತ್ತಿರುತ್ತಾನೆ. ಒಂದು ಹಾಡುತ್ತಾ ಹಾಡಿನ ಪರಂಪರೆಯನ್ನು ಉಳಿಸುವ ಕೆಲಸ ಮಾಡುವುದು. ಎರಡು ಅದೇ ಕಾಲಕ್ಕೆ ಹಿಂದಿನವರ ಹೊಸ ಅಂಶಗಳನ್ನು ಸೃಷ್ಠಿಸುವ ಕೆಲಸ ''[1] ಕಂಬಾರರು ಕೂಡಾ ತಾವು ಆಯ್ಕೆ ಮಾಡಿಕೊಂಡ ಜನಪದ ಮತ್ತು ತಂತ್ರಗಳನ್ನು, ಐತಿಹ್ಯಗಳನ್ನು ಪುನರ್‌ಸೃಷ್ಠಿಗೊಳಿಸುತ್ತಿರುತ್ತಾರೆ. ಇದು ಇವರ ಚಕೋರಿ ಮತ್ತು ಶಿಖರ ಸೂರ್ಯದಲ್ಲೂ ಮುಂದುವರಿದಿದೆ.

ಕಂಬಾರರ ಚಕೋರಿ ಮತ್ತು ಶಿಖರಸೂರ್ಯದ ವಸ್ತುಗಳು ಪುರಾಣ ಮತ್ತು ಚರಿತ್ರೆಯಿಂದ ರೂಪುಗೊಂಡವು. ಚಕೋರಿಯು ಜೀವಸೃಷ್ಠಿಯ ಆದಿಮ ಕತೆಯನ್ನು, ಪುರಾಣ ಜಗತ್ತನ್ನು ಒಳಗೊಂಡಿದೆ. ಶಿಖರಸೂರ್ಯ ಕೃತಿಯು ಚರಿತ್ರೆ, ಪುರಾಣ, ವರ್ತಮಾನ, ದೈವಿಕ ಜಗತ್ತು, ಮಾನವ ಜಗತ್ತುಗಳು ಇವತ್ತಿನ ಸಂದರ್ಭದಲ್ಲಿ ತಳೆಯುವ ಬೇರ ಬೇರೆ ರೂಪಗಳನ್ನು ಕಾಣಬಹುದಾಗಿದೆ. ಕಂಬಾರರ ಉಳಿದ ನಾಟಕಗಳಾದ ಸಿರಿಸಂಪಿಗೆ, ಮಹಾಮಾಯಿಗಳಲ್ಲಿ ಕೂಡಾ ಇದನ್ನು ಕಾಣಬಹುದು. ಇದು ಹೆಚ್ಚು ವಿಸ್ತೃತವಾಗಿ ರೂಪುಗೊಂಡಿರುವುದನ್ನು ಶಿಖರ ಸೂರ್ಯ ಮತ್ತು ಚಕೋರಿಗಳಲ್ಲಿ ಕಂಬಾರರಿಗೆ ಚರಿತ್ರೆ

ಎನ್ನುವುದೇ ಇಲ್ಲ ಎಂಬ ನಂಬಿಕೆಯವರು. ಭೂತ-ವರ್ತಮಾನ ಭವಿಷ್ಯತ್‌ಗಳು ಒಂದನ್ನೊಂದು ಒಳಗೊಂಡಿರುತ್ತವೆ ಎನ್ನುವ ಮನೋಭಾವ.ಅಂದರೆ ಕಂಬಾರರ ಮಾತುಗಳಲ್ಲೇ ಹೇಳುವುದಾದರೆ ''ಭೂತವನ್ನು, ವರ್ತಮಾನದಲ್ಲಿ ಭಾಷಾಂತರಿಸಿಕೊಳ್ಳದಿದ್ದರೆ ಅದಕ್ಕೆ ಅರ್ಥವೇ ಇಲ್ಲವೆನ್ನುವುದು. ಹೀಗಾಗಿ ಇತಿಹಾಸವೆನ್ನುವುದು ಹಿಂದಿನ ಘಟ್ಟವೇ ಅಲ್ಲ. ಹಿಂದೆ ಇದ್ದ ವ್ಯಕ್ತಿ ಅಲ್ಲ. ಇದು ತನ್ನ ಸ್ವರೂಪವನ್ನು ಒಡೆದುಕೊಂಡು ವರ್ತಮಾನದಲ್ಲಿ ತಳೆಯುವ ಹೊಸ ಪುರಾಣ.''2 ಕಂಬಾರರಿಗೆ ಭೂತ ಎನ್ನುವುದೇ ಇಲ್ಲ ಇರುವುದೆಲ್ಲವೂ ಕೂಡಾ ವರ್ತಮಾನವೇ ಆದರೆ ಪಕ್ಷಿಮದವರು ರೂಪಿಸಿದ ಕಾಲವನ್ನು ವಿಂಗಡನೆಯ ಕ್ರಮವನ್ನು ಕಂಬಾರರು ಒಪ್ಪುವುದಿಲ್ಲ. ಈ ಕಾರಣಕ್ಕಾಗಿಯೇ ಕಾಲವನ್ನು ಸದಾ ಹರಿಯುವ ಝರಿಗೆ ಹೋಲಿಸುತ್ತಾರೆ.

ಚಕೋರಿ ಮತ್ತು ಶಿಖರ ಸೂರ್ಯಗಳು ಮಂಡಿಸುವ ಪುರಾಣಗಳು ಈಗಾಗಲೇ ಇರುವಂತಹವುಗಳು. ಇದನ್ನು ಕಂಬಾರರು ಮಂಡಿಸಿರುವ ದರ್ಶನ ಹೊಸತು. ಚಕೋರಿಯ ಆಕಾಶ ಭೂಮಿ ಒಂದಾಗುವ ನೆಲೆಗಳು, ಪೂರ್ವಜರ ಲೋಕವನ್ನು ಪ್ರವೇಶಿಸುವ ದೈವ ಜಗತ್ತುಗಳ ಜೊತೆಗಿನ ಸಂಬಂಧಗಳು, ಲೌಕಿಕ -ಅಲೌಕಿಕದ ನೆಲೆಗಳು ಇಡೀ ಕೃತಿಯ ತುಂಬಾ ತುಂಬಿಕೊಂಡಿವೆ. ಕಥೆಯ ಪ್ರಾರಂಭದಲ್ಲಿಯೇ 'ಜಗತ್ತು ಸೃಷ್ಠಿಯಾಗುವ' ಕಥಾನಕವು ಜಾನಪದ ಪುರಾಣಗಳಿಂದ ರೂಪುಗೊಂಡಿದ್ದವು. ಶಿವನು ತನ್ನ ಪ್ರತಿಬಿಂಬವನ್ನೇ ವ್ಯಾಮೋಹಿಸಿ ಅವನ ಅಂಗದಿಂದಲೇ 'ಆದಿಮಾಯೆ' ಯನ್ನು ಸೃಷ್ಟಿ ಮಾಡುವುದರ ಕಥೆಯು ಈಗಾಗಲೇ ಜಾನಪದ ಕಥೆ ಪುರಾಣಗಳಲ್ಲಿ ಪ್ರಚಲಿತವಿರುವಂತದ್ದು ಮತ್ತು ಕಂಬಾರರ ಸಿರಿಸಂಪಿಗೆ, ಋಷ್ಯಶೃಂಗ ನಾಟಕಗಳು ಈ ರೀತಿಯ ದೇಹ-ಆತ್ಮಗಳ ನಡುವಿನ ವಿಘಟನೆಯನ್ನು ಹೇಳುವಂತವುಗಳು. ಆದರೆ ಚಕೋರಿಯಲ್ಲಿ ಕತ್ತಲೆಯಲ್ಲಿ ಕಳೆದುಹೋದ ಆದಿಮಾಯೆಯನ್ನು ಹುಡುಕುವ ಸಲುವಾಗಿಯೇ ಸೂರ್ಯ ಮತ್ತು ಚಂದ್ರರನ್ನು ಸೃಷ್ಟಿ ಮಾಡುವುದು ಆ ಮೂಲಕ ಭಿನ್ನ, ಸಂಸ್ಕೃತಿಗಳು ರೂಪುಗೊಂಡಿತು. ಆದಿಮಾಯೆಯೇ 'ಪುಣ್ಯಕೋಟಿ'ಯ ಅವತಾರ ತಾಳುವುದರ ಮೂಲಕ ಸೃಷ್ಠಿಯ ರಚನೆಯಲ್ಲಿ ತನ್ನನ್ನು ತೊಡಗಿಸಿಕೊಳ್ಳುತ್ತಾಳೆ. ಆದಿಮಾಯೆಯು ಈ ಲೋಕದಲ್ಲದವಳು ಆದರೆ ಇಲ್ಲಿನ ಸಂಬಂಧಗಳನ್ನು ಏರ್ಪಡಿಸಿಕೊಳ್ಳುವ ಸಲುವಾಗಿಯೇ 'ಪುಣ್ಯಕೋಟಿ' ಯನ್ನಾಗಿ ಕಂಬಾರರ ಪುನರ್ ಸೃಷ್ಟಿಸಿದ್ದಾರೆ. 'ಇಡೀ ಮೂಲದ ಸೃಷ್ಠಿ ಕಥೆಯ ಮಿಥ್‌ನ್ನು ನಿರಾಕರಿಸಿ ಹೊಸ ರೀತಿಯ ಮಿಥ್‌ನ್ನು ಸೃಷ್ಟಿಮಾಡಲಾಗಿದೆ.'

ಶಿವಾಪುರದ ಹಟ್ಟಿಯ ಸಂಸಾರದ ದಿನನಿತ್ಯದ ವಿವರಗಳು, ಜೀವನಕ್ರಮ, ಆಹಾರಪದ್ಧತಿಗಳು, ತಾಯಿಪ್ರೀತಿಯ ಮೌಲ್ಯಗಳು ತುಂಬಿವೆ. ಇಂತಹ ಲೋಕದ ವ್ಯಕ್ತಿಯಾದ ಗೊಲ್ಲರ ಕುಲದ ಚಂದಮುತ್ತನು ದನ ಕಾಯುವ ಸಂದರ್ಭದಲ್ಲಿಯೇ ಈ ಲೋಕದಲ್ಲಿನ ಅಲೌಕಿಕಳೆನಿಸುವ ಯಕ್ಷಿಯ ಶಿಲೆಯನ್ನೇ ನೋಡಿ ಮೋಹಿಸುತ್ತಾನೆ. ಕೃತಿಯಲ್ಲಿನ ಕನಸುಗಳು ಮಾತಾಡುವ ಈ ಮಾತುಗಳನ್ನು ಗಮನಿಸಬಹುದು.

''ಎಲ್ಲಿದ್ದಾಳೆ ಯಕ್ಷಿ ?
ಎರಡು ಲೋಕಂಗಳ ಮಧ್ಯೆ
ಕರುಳ ಬಳ್ಳಿಯ ಬೆಳಸಿ
ಎರಡನ್ನು ಬೆಸೆಯುವಂತೆ''[3]

ಈ ಸಾಲುಗಳಲ್ಲಿ ಕಂಬಾರರು ಹೊಸ ರೀತಿಯಾದ ಈ ಲೋಕದಲ್ಲದ ಸಂಬಂಧವನ್ನು ಒಳಗೊಳ್ಳಬೇಕೆಂಬ ಹಂಬಲವಿದೆ. ಇಲ್ಲಿ ಬರುವ ಶಿವಾಪುರದ ಲೋಕ ಮತ್ತು ಯಕ್ಷಿಯ ದೈವಿಕ ಪುರಾಣದ ಲೋಕಗಳನ್ನು ಬೇರ ಬೇರೆಯಾಗಿ ಕಾಣದೇ ಅವೆರಡನ್ನು ಬೆಸೆಯುತ್ತಿದ್ದಾರೆ ಮತ್ತು ಇವೆರೆಡರ ಸಂಬಂಧಗಳು ತೆಳುವಾದದ್ದಲ್ಲ. ಕರುಳು ಬಳ್ಳಿಯನ್ನು ಮುಂದೆ ಬೆಳೆಸಬೇಕೆಂಬ ಇಚ್ಛೆಯುಳ್ಳದ್ದು. ಮತ್ತೆ ಈ ಸಾಲುಗಳನ್ನು ಹೇಳುವ 'ಕನಸುಗಳು' ಮನುಷ್ಯನ ಜ್ಞಾನವನ್ನು, ಸಂಬಂಧಗಳನ್ನು ಬಯಕೆಗಳನ್ನು ಈಡೇರಿಸುವಂತವುಗಳು.

ಚಕೋರಿಯಲ್ಲಿ ಯಕ್ಷಿ ಮತ್ತು ಚಂದಮುತ್ತನ ಈ ಸಂಬಂಧಗಳೇ ಬೇರೆ ಬೇರೆ ಸ್ತರಗಳನ್ನು ಪಡೆದುಕೊಂಡಿವೆ. ಇದು ದೈವ-ಮಾನವರ ನಡುವೆ ಏರ್ಪಡುವ ನೆಲೆಯಾಗಿದೆ. ತನ್ನ ಕನಸಿನಲ್ಲಿ ಬರುವ ಈ ಯಕ್ಷಿಯನ್ನೇ ಮೋಹಿಸಿ ಅವಳನ್ನು ಪೂಜಿಸುವುದು. ಇವನ ರಾಗಕ್ಕೆ ಅವಳು ಮನಸೋತು ನೃತ್ಯ ಮಾಡಲು ಹಂಬಲಿಸುವುದು ಇವೆಲ್ಲವೂ ಕೂಡಾ ಈ ರೀತಿಯ ಅತಿಮಾನುಷವೆನಿಸುವ ನೆಲೆಗಳಾಗಿವೆ. ಯಕ್ಷಿಯೇ ಹೊಸ ದೈವವಾಗಿ ಅವತಾರವಾಗುವುದು ಕೂಡಾ ಇಂತಹ ಅತಿಮಾನುಷ್ಯವನ್ನು ನಿರಾಕರಣೆ ಮಾಡುವ ಭಾಗವಾಗಿಯೇ ನೋಡಬಹುದು. ಕನಸಿನ ರೂಪದಲ್ಲಿ ಕಾಣಿಸಿಕೊಳ್ಳುವ ಈ ಹೊಸ ದೈವವು ಅವತಾರವಾಗುವುದು ಕಾಡಿನಲ್ಲಿ.

''ನಿನ್ನೆ ಭೂತಸಂಚಾರದ ವ್ಯಾಳ್ಯಾದಲ್ಲಿ
ನನಗೂ ಒಂದು ಕನಸಾಯ್ತಲ್ಲ ನನ್ನಪ್ಪ
ಆಕಾಶದ ಗಂಟೆ ಢಣಲೆಂದು ಹೊಡೆದವು

ಬೆಟ್ಟದ ಮೈತುಂಬಿ ಕಾಡು ಗಿಡಮರ ಒಡಮುರಿದು
ಹೂ ಹೂ ಚೆಲ್ಲಿ ಹುಡದಿಯಾಡಿದವು
ಝಗ್ಗಂತ ಬೆಳಕಲ್ಲಿ ಫಳ್ಳಂತ ಹೊಳೆಯಾಕಾಶದಿಂದ
ಯಾರೋ ಉನ್ನತ ದೇವತೆ
ಏಣಿಯಿಲ್ಲದೆ ಕೆಳಗಿಳಿದು ಬಂದುದ ಕಂಡೆ
ಮೂರು ದಾರಿ ಸೇರುವಲ್ಲಿ ದೀವಿಗೆಯ
ಬೆಳಕಾಡಿದ ಕಂಡೆ''4

ಹೀಗೆ ಕನಸಿನಲ್ಲಿ ಕಾಣಿಸಿಕೊಂಡ ಯಕ್ಷಿಗೂ ದೇವಸ್ಥಾನವನ್ನು ನಿರ್ಮಾಣ ಮಾಡುವುದು, ಚಂದಮುತ್ತನನ್ನು ನೇಮಿಸುವುದು, ಪ್ರತಿವರ್ಷ'ಪರಿಸೆ' ಮಾಡುವ ಈ ಸಂಗತಿಗಳು ಲೋಕದರೂಡಿಯಲ್ಲಿ ಮೈದಾಳಿವೆ. ಯಕ್ಷಿಯನ್ನು ಮದುವೆಯಾಗುವುದು, ಯಕ್ಷಿಯು ಲಕ್ಕಬ್ಬೆಯನ್ನು 'ಅತ್ತೆ' ಎಂದು ಕರೆಯುವುದೂ ಇವೆಲ್ಲಾ ಸಂಗತಿಗಳಲ್ಲಿ ಯಾವುದು ದೈವ ಜಗತ್ತು - ಮಾನವ ಜಗತ್ತು, ಪುರಾಣ - ನಂಬಿಕೆಗಳ ನಡುವಿನ ಅಂತರವೇ ಇಲ್ಲವಾಗಿವೆ.

ಚಂದಮುತ್ತ ಮುದಿಜೋಗ್ತಿಯನ್ನು ಬೆನ್ನಟ್ಟಿ ತಿಂಗಳ ರಾಗವನ್ನು ಪಡೆಯಲು ಇವನು ಮಾಡಲು ಯಾತ್ರೆಯು ಮಹಾಕಾವ್ಯದ ನಾಯಕರು ಮಾಡುವ ಯಾತ್ರೆಯಂತಿದೆ. ಚಿನ್ನಮುತ್ತ ಅಧಿಕಾರ, ಸಾಮ್ರಾಜ್ಯ ಕೀರ್ತಿಗಾಗಿ ಮಾಡಿದರೆ ಚಂದಮುತ್ತ ಕಲೆ, ಪ್ರೀತಿ, ಮಾನವೀಯತೆಗಳಿಗಾಗಿ ತನ್ನ ಪೂರ್ವಜರ ಲೋಕವನ್ನು ಆಯ್ಕೆ ಮಾಡಿಕೊಳ್ಳುತ್ತಾನೆ. ಇದು ಎಂತಹ ಲೋಕವೆಂದರೆ ಸ್ವಂತ ಬಾಲಕನಾಗಿರುವ ಚಂದಮುತ್ತನಂತವನ್ನು ಕೂಡಾ ಅಪ್ಪಿಕೊಳ್ಳುತ್ತದೆ. ಇದಕ್ಕೆ ಅಡೆ-ತಡೆಯಿಲ್ಲದ ಲೋಕ ಯಾವಾಗಬೇಕಾದರೂ ಹೋಗಿ ವ್ಯವಹರಿಸಬಹುದು. ಆದರೆ ವೈದಿಕ ಸಂಸ್ಕೃತಿಯ ದೇವ ಜಗತ್ತು ಇಷ್ಟು ಮುಕ್ತವಾಗಿಲ್ಲ. ಕಠಿಣತಪಸ್ಸು, ಬ್ರಹ್ಮಚರ್ಯೆ, ನಿಯಮುಗಳಿಗೆ ಮಾತ್ರ ಪ್ರತ್ಯಕ್ಷವಾಗುವಂತವುಗಳು. ಚಕೋರಿಯ ಈ ಲೋಕಕ್ಕೆ ಸುಲಭವಾಗಿ ಪ್ರವೇಶಿಸಬಹುದು. ಚಂದಮುತ್ತನಲ್ಲಿ ಹೇಳುವ ಮುದಿ ಜೋಗ್ತಿಯ ಈ ಮಾತುಗಳನ್ನು ಗಮನಿಸಬಹುದು.

'ಕಲಿತುಕೋಬೇಕಪ್ಪ ಖಾಲಿಯಾಗುವುದನ್ನು
ಹಾಗೆಯೇ ಬೇರೊಂದು ಬೆಳಕು ನುಗ್ಗಿದಾಗ
ತುಂಬಿಕೊಳ್ಳೋದನ್ನ''5

ಹೀಗೆ ಇಲ್ಲದ್ದನ್ನು ಪಡೆಯಲು ಪೂರ್ವಜರ ಲೋಕ ಪ್ರವೇಶಿಸುವ ಚಂದಮುತ್ತನ ಜೊತೆ ತನ್ನ ಕುಲದ ಹಸು, ಪೂರ್ವಿಕರೆಲ್ಲರನ್ನು ಕೂಡಾ ಒಳಗೊಳ್ಳುತ್ತಾನೆ. ಮುದಿ ಜೋಗ್ತಿಯು ಇವಳನ್ನು ಪರೀಕ್ಷಿಸಿಯೇ ತಿಂಗಳ ರಾಗವನ್ನು ಕೊಡುವುದು ಪೂರ್ವಜರ ಲೋಕಕ್ಕೇ ತಳ್ಳುವ ಮುದಿಜೋಗ್ತಿಯು ಚಂದಮುತ್ತ ಇಂತಹ ಲೋಕವನ್ನು ಇದುವರೆಗೂ ಕಂಡೇ ಇಲ್ಲದಂತದ್ದು. ''ಕಾಲವೆಷ್ಟೋ ಸಂದಾಯವಾದರೂ ಕಗ್ಗತ್ತಲು ಸರಿಯಲಿಲ್ಲ. ಇದ್ಯಾವುದೋ ನಾಯಿ ನರಕವಿರಬೇಕು. ತಮಂದಘನ ಘನಾಂದಾರಿ ಕಗ್ಗತ್ತಲು ಕೈಗೆ ತಾಗುವ ಕತ್ತಲು, ಮೈಗೆ ಮೆತ್ತುವ ಕತ್ತಲು''6 ಇಂತಹ ಲೋಕವು ಶಿವನ ಕತ್ತಲಿನ ಲೋಕವನ್ನು ನೆನಪಿಸುತ್ತದೆ. ಈ ಲೋಕದಲ್ಲಿಯೂ ಕೂಡಾ ಚಂದಮುತ್ತನ ಜೊತೆ ಮಾತಾಡುವ ಅಸ್ಥಿಪಂಜರ ರೂಪದ ಶರೀರ ಮಾತಾಡುತ್ತದೆ. ಅಲ್ಲಿಯೇ ಪುಣ್ಯಕೋಟಿಯ ಕೊಂಬನ್ನು ಪಡೆದು ಕ್ಷಣಅರ್ಥದಲ್ಲಿಯೇ. 'ನಮ್ಮ ಲೋಕಕ್ಕೆ' ವಾಪಸ್ಸಾಗುತ್ತಾನೆ. ಇಡೀ ಚಕೋರಿಯ ತುಂಬಾ ಬೇರೆ - ಬೇರೆ ಜಗತ್ತುಗಳ ಜೊತೆ ಅನುಸಂಧಾನ, ಮಾತುಕತೆ, ಓಡಾಟ ಸಾಧ್ಯವಾಗಿವೆ. ಇವೆಲ್ಲವೂ ಮತ್ತೆ ಇಲ್ಲಿಯೇ ಸೃಷ್ಠಿಯಾದಂತಿವೆ.

ಚಕೋರಿಯ ಪುರಾಣಗಳು ಒಂದು ರೀತಿಯಲ್ಲಿ ಗ್ರೀಕ್‌ನ ಪುರಾಣಗಳಂತಿವೆ. ಚಂದಮುತ್ತನ ಈ ಯಾತ್ರೆ, ಯಕ್ಷಿ ಇವನನ್ನು ಆಯ್ಕೆ ಮಾಡಿಕೊಳ್ಳುವುದು. ಈ ಲೋಕದಲ್ಲದ ಅಲೌಕಿಕ ಶಕ್ತಿಗಳ ನೆರವು, ಸಂಬಂಧಗಳು, ಶಿವಾಪುರ, ಚಂದಮುತ್ತ, ಲಕ್ಕಬ್ಬೆ ಎಲ್ಲರೂ ಕೂಡಾ ಪುರಾಣದ ಪಾತ್ರಗಳಂತಿವೆ. ಆದರೆ ಈ ಪಾತ್ರಗಳು ಈ ಲೋಕವನ್ನು ಪ್ರತಿನಿಧಿಸುತ್ತಾರೆ ಎಂಬುದು ಕೂಡಾ ಅಷ್ಟೇ ಮುಖ್ಯವಾಗಿವೆ.

ಚಂದಮುತ್ತನ ಮುಂದೆ ಪ್ರತ್ಯಕ್ಷವಾಗುವ ಭೃಂಗೀಶನು ಚಂದಮುತ್ತನಿಗೆ ಕಾಡಿಸಿ ನಂತರ ಅವನಿಗೆ ಸಿದ್ಧಿಸಿದ ಕಲೆಗಾಗಿ ಒಲಿದವನು. ಮಹಾನುಭಾವನ ಜೊತೆ ಚಂದಮುತ್ತ ಜೊತೆಗೂಡಿ ಶುದ್ಧವಾದ ರಾಗಗಳನ್ನು ಮರಳಿ ಗಳಿಸುವ ಆ ಮೂಲಕ ಕೈಲಾಸವನ್ನು ಕರೆತರುತ್ತಾರೆ. ಆ ಮೂಲಕ ಮಹಾನುಭಾವನಿಗೆ ಇದ್ದ ಶಾಪವು ಹೋಗುತ್ತದೆ. ರಾಗಗಳು ಶುದ್ಧವಾಗುತ್ತದೆ. ಚಂದಮುತ್ತನು ಮುಂದುವರಿದು ಚಕೋರಿಯನ್ನು ಪಡೆಯುವ ಹಂಬಲ ಮತ್ತು ತಿಂಗಳರಾಗವನ್ನು ಗಳಿಸುವ ಸಲುವಾಗಿಯೇ ಮುದಿ ಜೋಗ್ತಿಯ ಬೆನ್ನಟ್ಟುತ್ತಾನೆ. ಇಂತಹ ಮುದಿ ಜೋಗ್ತಿಯ ವೇಷವನ್ನು ಧರಿಸಿರುವವಳು. '' ಹೂವಿನ ವಿನ್ಯಾಸದ ಚಾಪೆ ಮ್ಯಾಲೆ ಪದ್ಮಾಸನದ ಸಿಂಬೆ ಸುತ್ತಿಕೊಂಡು ಮ್ಯಾಗಟೇ ಶಿಖರದಲ್ಲಿ ಹೆಡೆಯಂತೆ ಮುಖ ಮಾಡಿಕೊಂಡು ಕೈಯಲ್ಲಿಯ ಬಿದಿರು ಕೋಲನ್ನೇ ಕೊಳಲು ಮಾಡಿಕೊಂಡು ಕಣ್ಣು

ಮುಚ್ಚಿಕೊಂಡು ನುಡಿಸುತ್ತ ಬಹಳ ಹೆಚ್ಚಳದಿಂದ ಕೂತಿದ್ದಾಳೆ. ಕೈಕಾಲು ನೋಡಿದರೆ ಒಂದು ಕರಡಿಯ ಅವಕಾಶ, ಮೇಲೆ ನೋಡಿದರೆ ಒಂದು ಕೋತಿ ಅವತಾರ, ಕೆದರಿದ ಜಡೆ, ಪುಟ್ಟ-ಪುಟ್ಟ ಹೆಡೆ ತೆರೆದುಕೊಂಡು ಕಂಡಿವರಿದು ಹೆಣೆದಾಡುವ ಮಿಡಿನಾಗರಗಳ ಅವತಾರ''[9] ವೈದಿಕ ನೆಲೆಯಲ್ಲಿನ ಅವತಾರಗಳ ಕಲ್ಪನೆ, ವರ್ಣನೆಗಳು ಎಲ್ಲವೂ ಕೂಡಾ ಇಲ್ಲಿ ಜಾನಪದೀಯ ನೆಲೆಯಿಂದ ಕಲ್ಪನೆಗಳಿಂದ ರೂಪುಗೊಂಡಿವೆ. ಇಂತವಳಿಂದ ಚಂದಮುತ್ತ ತಿಂಗಳ ರಾಗವನ್ನು ಪಡೆದುಕೊಳ್ಳುತ್ತಾನೆ. ಇಂತಹ ಮುದಿ ಜೋಗ್ತಿಯಲ್ಲೇ ''ಹಿಡಿದೆಳೆದರೆ ಅವಳುಟ್ಟ ಮುದಿ ಚರ್ಮ ಕೈಗೇ ಬಂದು ಮುದಿ ಚರ್ಮದ ಒಳಗೊಬ್ಬ ಜಗಜಗ ಬೆಳಗುವ ದಿವ್ಯ ಸುಂದರಿ. ಮೈ ತುಂಬ ಪರಿಮಳ ನಾರುವ ದಿಗಂಬರಿ, ಹಸಿರುಗಣ್ಣಿನ ಚಕೋರಿ ಎಂಬ ಯಕ್ಷಿ ನಾಂಚಿ ನಾರುದಾಣಗಳ ಮುಚ್ಚಿಕೊಂಡು ನಿಂತಿದ್ದಾಳೆ''[8] ಇಂತಹ ಯಕ್ಷಿಯನ್ನು ಚಂದ ಮುತ್ತನನ್ನು ಪಡೆದುಕೊಂಡವಳು.

ಚಕೋರಿಯು ಆಯ್ಕೆ ಮಾಡಿಕೊಳ್ಳುವುದು ಚಂದಮುತ್ತನನ್ನು ಆದರೆ ಚಕೋರಿಯು ಕೂಡಾ ಸ್ವತಂತ್ರಳಲ್ಲ ಎಂಬುದನ್ನು ಈ ಸಾಲುಗಳಿಂದ ಗಮನಿಸಬಹುದು

''ಗುರುವಲ್ಲಿ ನಿನ್ನ ಇಚ್ಛಾಧೀನ
ನಾವು ಹಂಗಿಗರಯ್ಯ ನಿನ್ನ ಕೊಳಲುಲಿಗೆ
ಬೆಂಕಿ ಪ್ರಕಟವಾಗುವುದಕ್ಕೆ
ಬೇಕು ಮರದ ಆಸರೆ
ಅಂತೆಯೇ ಬೇಕಯ್ಯಾ ನೀನು ನಮಗೆ [9]

ದೇವತೆಯಾದ ಇವಳು ಕೂಡಾ ರೂಪವಿಲ್ಲದವಳು. ನಿರಾಕಾರವಾಗಿರುವಂತಳು. ಇಂತಹ ಚಕೋರಿಯ ಜೊತೆಗಿನ ಸಂಬಂಧಗಳ ಬಗ್ಗೆಯು ಕೂಡಾ ಚಂದಮುತ್ತನಿಗೆ ಅಸಮಾನಗಳಿವೆ. ಲೋಕವಲ್ಲದವರ ಜೊತೆಗಿನ ಒಡನಾಟಕ್ಕೆ ಭಯ, ಭಕ್ತಿಗಳು ಕೂಡಾ ಕಾರಣವಾಗಿದೆ. ಜೊತೆಗೆ ಈ ಬೆಸುಗೆಗಳು ಸಾಧ್ಯವೇ ಎಂಬುದು ಕೂಡಾ ಮುಖ್ಯವಾದ ಪ್ರಶ್ನೆಯಾಗಿದೆ.

''ಭಯವಾಗುತ್ತದೆ ದೇವೀ
ಶಕ್ಯವೇ ಒಗೆತನ ನಿಮ್ಮೊಂದಿಗೇ?
ಲೋಕ ಲೌಕಿಕದವನು ನಾನು
ಮುಗಿಲ ತುದಿಗಿರುವವರು ನೀವು

ನಿಮ್ಮ ಕಟ್ಟಳೆ ರೀತಿ ರಿವಾಜು ನನಗರಿದು
ನರಲೋಕದ ನಡಾವಳಿ ನಿಮಗರಿದು
ನಿಮ್ಮೊಂದಿಗೆ ವ್ಯವಹರಿಸಲು
ನನ್ನ ಜಾಣ್ಮೆ ಸಾಲದೇ ಬರಬಹುದು
ನನ್ನ ದಡ್ಡತನ ಸಮೇತ ಎಲ್ಲಾ ನಿನ್ನದು ದೇವೀ ''[10]

ಚಂದಮುತ್ತನ ಈ ಮಾತುಗಳ ಪುರಾಣದ ಜೊತೆಗಿನ ಸಂಬಂಧದ ಸ್ಥಾಪನೆ, ಗೆಳೆತನ, ಒಗೆತನ, ಭಿನ್ನರೀತಿಯ ನಡಾವಳಿಕೆಗಳ ಸಾಧ್ಯವೇ ಎನ್ನುವುದು ಕೂಡಾ ಪ್ರಶ್ನೆಯಾಗಿದೆ. ಕಂಬಾರರು ಇದನ್ನು ಮೀರಿ ಇಂತಹ ಪುರಾಣ ಅನಾಧುನಿಕ ಜಗತ್ತಿನೊಡನೆ ಸಂಬಂಧಗಳನ್ನು ಸ್ಥಾಪಿಸುವಲ್ಲಿಯೇ ಹೆಚ್ಚು ಆಸಕ್ತರಾಗಿದ್ದಾರೆ. ಮತ್ತು ಇದು ಎರಡು ಕೃತಿಗಳಲ್ಲೂ ಕೂಡಾ ಕಾಣಬಹುದು. ಯಕ್ಷಿ ಮತ್ತು ಚಂದಮುತ್ತನ ಸಮ್ಮಿಲನವೇ ಈ ರೀತಿಯ ಪಾರಂಪರಿಕ ಜಗತ್ತನ್ನು, ಪುರಾಣಗಳನ್ನು ಮರು ಸೃಷ್ಠಿ ಮಾಡುತ್ತಾರೆ.

''ಒಬ್ಬರಿಗೊಬ್ಬರು ಕನ್ನಡಿಯಾದರು
ಬೇಲಿಯಿಲ್ಲದ ಬಯಲಿನಲ್ಲಿ
ಒಬ್ಬರನ್ನೊಬ್ಬರು ಒಳಗೊಂಡರಿಬ್ಬರು
ಸುರಿವ ಎಳೆ ಬೆಳದಿಂಗಳಲ್ಲಿ''[11]

ಈ ಸಾಲುಗಳಲ್ಲಿ ಮುಖ್ಯವಾಗಿ ಪುರಾಣ ಯಾವುದು, ವರ್ತಮಾನ ಯಾವುದು, ಇತಿಹಾಸ ಯಾವುದು, ಮಿಥ್‌ಯಾವುದು ? ಎಂದು ಕೃತಕವಾಗಿ ವಿಂಗಡನೆಗೆ ನಿಲುಕದೇ ಇರುವ ರೂಪವನ್ನು ಕಾಣಬಹುದು. ಕಂಬಾರರೇ ಹೇಳುವ ಹಾಗೆ ''ಇತಿಹಾಸವನ್ನು ಮಿಥ್ ಮಾಡುವವರು ನಾವು ನಮ್ಮ ಸೃಜನಶೀಲತೆ ವ್ಯಕ್ತಿಯ ಇತಿಹಾಸದ ಶುಷ್ಕತೆಯನ್ನು ಮೀರುವ ಬಗೆಯದ್ದು''[12] ಕಂಬಾರರು ಸೃಷ್ಟಿಸುವ ನಾಟಕ, ಕಾವ್ಯ, ಕಾದಂಬರಿಗಳಲ್ಲಿ ಬರುವ ಶಿವಾಪುರದ ದೇವದೇವಿಯರು ಪಲಟಕ್ಕೇ ಒಳಗಾಗುವ ಮತ್ತು ವಾಸ್ತವವಲ್ಲದ ಇನ್ನೊಂದು ಮಾರ್ಗವನ್ನು ಕಟ್ಟಿಕೊಡುತ್ತಾರೆ.

ಚಕೋರಿಯು ಶಿವಾಪುರ, ಶಿವಾಪಾದ, ಲಕ್ಕಬ್ಬೆ, ಚಂದಮುತ್ತನಂತವರ ಪಾತ್ರಗಳು ಪುರಾಣದ ಸ್ವರ್ಗವನ್ನು ಪಡೆದು ತಮ್ಮದೇ ಆದ ಸ್ವಂತಿಕೆಯನ್ನು ಪಡೆದುಕೊಂಡಿವೆ. ಚಂದಮುತ್ತ ಪ್ರಾರಂಭದಲ್ಲಿ ಶಿಲೆಯನ್ನೇ ನೋಡಿ ವ್ಯಾಮೋಹಿಸಿ ಅದನ್ನು ತನ್ನ ಕಲೆಯಿಂದ ಮುಕ್ತಿಗೊಳಿಸಿ ತಾನು ಕಾದಂಬರಿಯ ಕೊನೆಯಲ್ಲಿ ಶಿಲೆಯಾಗುವುದು ಕೂಡಾ ಪುರಾಣದ

ಹಾಗೇ ಕಾಣುತ್ತಲೆ ಚಂದವುತ್ತ ಬಯಲಾಗುವ ಕಲ್ಪನೆಯು ಕೂಡಾ ಕೃತಿಯಲ್ಲಿ ಅರ್ಥಪೂರ್ಣತೆಯನ್ನು ಪಡೆದುಕೊಂಡಿದೆ. ಇಂತಹ ಕೃತಿಯ ನಮ್ಮದಲ್ಲದ ಯಾವುದೇ ಕಥೆ, ಪಾತ್ರಗಳು ಏನಿಸಿದರೂ ವಾಸ್ತವದಲ್ಲಿ ನಮ್ಮೊಳಗೇ ಇರಬಹುದಾದ ಪ್ರಜ್ಞೆ, ಜಾಗೃತಾವಸ್ಥೆ ಆದಿಮದ ಬಯಕೆಗಳನ್ನು ಹೇಳುತ್ತಿವೆ.

'ಶಿಖರಸೂರ್ಯ'ದಲ್ಲಿ ಪುರಾಣ ಮತ್ತು ಅನಾಧುನಿಕ ಜಗತ್ತುಗಳು ವಾಸ್ತವವೆನಿಸುವಷ್ಟರ ಮಟ್ಟಿಗೆ ರೂಪುಗೊಂಡಿವೆ. ಪುರಾಣದ ಜಗತ್ತನ್ನು ವರ್ತಮಾನದಿಂದ ಬೇರ್ಪಡಿಸಲು ಅಸಾಧ್ಯವೆನಿಸಿದೆ. ಕಂಬಾರರು ಈ ಕಾದಂಬರಿಯಲ್ಲಿ ಜಾನಪದ ಜಗತ್ತು, ಪುರಾಣ, ಮಿಥ್‌ಗಳು, ಆಧುನಿಕವೆನಿಸುವ ಕವಿತೆಗಳು, ಕಥೆಗಳ ಗುಚ್ಛ, ಇಲ್ಲಿ ಮೂಡಿಬಂದಿವೆ. ದಿನನಿತ್ಯದ ಅನೇಕ ಸಂಗತಿಗಳ ಸಂಘರ್ಷಗಳು ಇವುಗಳನ್ನು ಪರಿಹರಿಸಲು ಪವಾಡದಂತೆ ಸೂಚನೆಗಳನ್ನು ಈ ಕಾದಂಬರಿ ಮಂಡಿಸುತ್ತದೆ. ಈ ಪವಾಡ ಸದೃಶಗಳಲ್ಲೇ ಕಂಬಾರರು ಹೊಸ ರೀತಿಯ ಕಾಣ್ಕೆಯನ್ನು ಕೊಟ್ಟಿದ್ದಾರೆ. ಕಾದಂಬರಿಯ ಬಗ್ಗೆ ಕಂಬಾರರು ಹೇಳುವ ಹಾಗೇ '' ಈ ಕಾದಂಬರಿಯ ಕಾಲವನ್ನು ಆಧುನಿಕವಲ್ಲದ ಹಿಂದಿನ ಯಾವುದಾದರೂ ಕಾಲಮಾನದಲ್ಲಿ ನಡೆದದ್ದೆಂದು ಭಾವಿಸಬೇಕು'' . ಅಂದರೆ ವರ್ತಮಾನವಲ್ಲದ್ದು ಅದು ಪುರಾಣದ ಕಾಲದ್ದೋ, ಇತಿಹಾಸವು ದೈವಿಕ ಜಗತ್ತುಗಳು ಆಗಿರಬಹುದು, ಆದರೆ ಕಾದಂಬರಿ ಮಂಡಿಸುವ ಅನೇಕ ವಿವರಗಳು ಕೂಡಾ ಇದನ್ನೇ ಪ್ರತಿಪಾದಿಸಿದರೂ ಕೂಡಾ ಓದುಗರಿಗೆ ಇವೆಲ್ಲವುಗಳು ವರ್ತಮಾನದಲ್ಲೇ ನಡೆಯುತ್ತಿರುವಂತೆ ಅನುಭವವಾಗುತ್ತದೆ. ಆಧುನಿಕವಲ್ಲದ ಕಾಲವೆಂದು ಈ ಕೃತಿಯನ್ನು ಪರಿಗಣಿಸಲು ಸಾಧ್ಯವಾಗುವುದಿಲ್ಲ.

ಕಾದಂಬರಿಯ ಪ್ರಸ್ತಾವನೆಯಲ್ಲಿ ಇತಿಹಾಸಕಾರರು ತಾವು ನಿರೂಪಣೆ ಮಾಡದಿರುವ ಕಥೆಯನ್ನು ಹೇಳುತ್ತಿದ್ದಾರೆ. ಇಲ್ಲಿ ಇತಿಹಾಸವಾಗಿರುವ ಎಷ್ಟೋ ಸಂಗತಿಗಳು ಐತಿಹ್ಯಗಳಾಗಿ, ಪುರಾಣಗಳಾಗಿ ಮಾರ್ಪಟ್ಟಿವೆ ಮತ್ತು ಇತಿಹಾಸವೆನ್ನುವುದು ಹೆಳವರ ಪ್ರಕಾರ ಅಂಥ ವ್ಯತ್ಯಾಸವೇನು ಇಲ್ಲದ ಪುರಾಣವೇ. ಪುರಾಣದ ದೇವರುಗಳೊಂದಿಗೆ ವರ್ತಮಾನದಲ್ಲಿ ನಾವು ಹೇಗೆ ವ್ಯವಹರಿಸುತ್ತೇವೆಯೋ ಹಾಗೆಯೇ ಕಾದಂಬರಿಯಲ್ಲಿ ಈ ರೀತಿಯ ದೇವರುಗಳು, ಅಲೌಕಿಕ ಲೋಕದ ಜೊತೆಗೆ ವರ್ತಮಾನದ ವ್ಯಕ್ತಿಗಳು ಸಂಪರ್ಕವನ್ನು ಸಾಧಿಸಿದವರು ಇದ್ದಾರೆ. ಹಾಗೂ ಸ್ವಂತ ದೈವತ್ವಕ್ಕೆ ಏರಿರುವ ಶಿವಾಪಾದನಂತವರು ಶಾಪಕ್ಕೆ ಗುರಿಯಾಗಿರುವ ನಾಗಾರ್ಜುನಂತಹ ಬೇತಾಳ ಸ್ಥಿತಿಯವರು ಸಮಾಧಿ ಸ್ಥಿತಿಯನ್ನು ತಲುಪುವವರು. ಯೋಗಿಗಳು ಕೂಡಾ ಕೃತಿಯ ಉದ್ದಕ್ಕೂ ಮುಖ್ಯ ಪಾತ್ರವಹಿಸುತ್ತದೆ.

ಶಿವಾಪುರದ ''ಶಿವಪಾದನು ಸಾಕ್ಷಾತ್ ಶಿವನು ವಾಸ ಮಾಡುವವನೆಂದೂ, ದೀರ್ಘಾಯುಷಿಗಳು, ಇಚ್ಛಾಮರಣಗಳು ತಪಸ್ವಿ ಪರಿಣಿತರು. ಮನುಷ್ಯನನ್ನು ಚಿರಂಜೀವಿಯಾಗಿರುವಷ್ಟು ವೈದ್ಯ ಗೊತ್ತಿದ್ದರೂ ಚಿರಂಜೀವಿಯಲ್ಲಿ ಗವಿಯೊಳಗೆ ಅಟ್ಟದಂತಿರುವ ಅಂತರಂಗಕ್ಕೆ ಬೇಕಾದಾಗ ಹೋಗಬಹುದು. ಅದರೊಳಗೆ ಹಿಂದಿನ ಶಿವಪಾದರ ಅಸ್ಥಿ ಪಂಜರಗಳು ಅದರ ಮೇಲೆ ತೀರದಲ್ಲಿ ಶಿವಪಾದನು ಕುಳಿತುಕೊಳ್ಳುವುದು.[13] ನಿತ್ಯ ಹಟ್ಟಿಯ ಜನರ ಜೊತೆ ವ್ಯವಹರಿಸುವ ಶಿವಪಾದನಂತವು ಈ ಲೋಕದವನು ಹೌದು ಮತ್ತು ದೈವ ಜಗತ್ತಿನವನು ಕೂಡಾ. ಇಲ್ಲಿನ ಜನರಿಗೂ ಕೂಡಾ ಶಿವಪಾದನ ಮಾತುಗಳನ್ನು ದಾಟದವರು. ಅವನು ದೇವರ ಸಾಕ್ಷಾತ್‌ರೂಪ ಇಂತಹ ಶಿವಾಪುರದಲ್ಲಿ ದುಷ್ಟ ಶಕ್ತಿಯಾಗಿ ರೂಪುಗಳು ಜಯಸೂರ್ಯನ ಮೂಲಕ ಪ್ರವೇಶವಾಗುತ್ತದೆ. ಇಲ್ಲಿಂದಲ್ಲೇ ಜಯಸೂರ್ಯನು ತನಗೆ ಬೇಕಾಗಿರುವ ಚಿರಂಜೀವಿಯಾಗುವ ವಿದ್ಯೆಯನ್ನು, ವಜ್ರಕಾಯಿಯಾಗುವುದು ಚಿನ್ನವನ್ನು ಮಾಡುವ ವಿದ್ಯೆ ಕಲಿಯಲು ಸಾಧ್ಯವಾಗುವಂತದ್ದು.

'ಶಿಖರಸೂರ್ಯದಲ್ಲಿ ಶಿವಾಪುರವೇ ಒಂದು ಆಧುನಿಕ ನವ ಪುರಾಣವನ್ನು ಸೃಷ್ಟಿಮಾಡಿವೆ. ಇಲ್ಲಿಂದಲೇ ಇದೇ ಜಗತ್ತನ್ನು ಕಾಣಬೇಕೆಂಬ ಹಂಬಲವಿದು. ಇದಕ್ಕೆ ಪರ್ಯಾಯವಾಗಿರುವ ಕನಕಪುರಿಯು ಕೂಡಾ ಇತಿಹಾಸದ ಅಥವಾ ಪುರಾಣದ ದುಷ್ಟನೆಲೆಯಾಗಿ ಕಂಡುಬರುತ್ತದೆ. ಆದರೆ ಇಂತಹ ಕನಕಪುರಿಯಲ್ಲಿ ಪುರಾಣದ ಜಗತ್ತುಗಳು, ದೈವಿಕ ನೆಲೆಗಳು ರೂಪುಗೊಳ್ಳಬಲ್ಲವು.' ಅದಕ್ಕೆ ಕಾರಣವಾಗುವವರ ಶಿವಾಪುರ ಮೂಲದ ಗೌರಿ, ಚಂಡೀದಾಸ, ಶಿಖರ ಸೂರ್ಯ ಇವರುಗಳ ಮೂಲಕವೇ ದೈವ ಜಗತ್ತಿನ ಒಳಿತು - ಕೆಡಕುಗಳು ಏರ್ಪಡುವವು, ಗೌರಿಯ ಮೂಲಕ ಮತ್ತು ಶಿವಾಪುರದ ನೆನಪುಗಳು, ಕನಸುಗಳು, ಕನಕಪುರಿಯ ರಾಜಮನೆಯಲ್ಲಿ ಸಂಚಲವನ್ನುಂಟು ಮಾಡುತ್ತವೆ. ಇವಳ ಕನಸಿನ ಮೂಲಕವೇ ಮುಂದೇ ಒದಗಲಿರುವ ದುರಂತತೆ ಮತ್ತು ಒಳ್ಳೇಯ ಘಟನೆಗಳು ಕಾಣಸಿಗುತ್ತವೆ. ಇವುಗಳು ರೂಪುಗೊಳ್ಳುವುದು ಕೂಡಾ ಶಿವಾಪುರದ ಆಶಯಗಳನ್ನು ವ್ಯಕ್ತಪಡಿಸುವಂತವುಗಳು. ಗೌರಿಯು ಕನಸುಗಳ ಮೂಲಕ ತಾನು ಇರುವಿಕೆಯನ್ನು ಗೊತ್ತಿಲ್ಲದಿರುವ ಜಗತ್ತಿನೊಡನೆ ವ್ಯಕ್ತಿಗಳೊಡನೆ ಸಂಭಾಷಿಸಲು ತೊಡಗುತ್ತಾಳೆ. ''ಒಂದು ದಿನ ಎಡಗೈಯಲ್ಲಿ ಆರು ಬೆರಳಿದ್ದ ಹುಡುಗನೊಬ್ಬ ತನ್ನ ಹಿಂದೆ ಹಿಂದೆ ನಡೆದು ಬರುವುದನ್ನು ಕನಸಿನಲ್ಲಿ ಕಂಡಳು. ಒಳಬಟ್ಟೆ ತೊಟ್ಟಿದ್ದ ಎತ್ತಿನ ಮ್ಯಾಲೆ ಕೂತುಕೊಂಡು ಕಾಡಿನಲ್ಲಿ ಬೇಟೆಯಾಡಿ ದೇವಸ್ಥಾನಕ್ಕೆ ಹೋದಾಗ ಹೊರಗೆ ಅದೇ ಅಥವಾ ಅಂಥಾದೇ ಎತ್ತು ನಿಂತುಕೊಂಡಿತ್ತು. ಎತ್ತಿನ ಬಳಿ ಅವನಿರಲಿಲ್ಲ. ಆತ ಮತ್ತು ಆ ಎತ್ತು ದೈವವೋ ?

ಭೂತವೋ ? ಗೊತ್ತಾಗದೆ ಹೆದರಿದಳು. ಆದರೆ ನೋಡುವುದಕ್ಕೆ ಚಂದ ಇದ್ದ ಹುಡುಗ ದೈವವೇ ಇರಬೇಕೆಂದು ಸಮಾಧಾನ ಮಾಡಿಕೊಂಡಳು''[14] ಗೌರಿಯ ಈ ಕಾಣ್ಕೆಯ ಮುಂದೇ ವಧುಪರೀಕ್ಷೆಗೆ ಬರುವ ನಿನ್ನಡಿ, ದೈವ ಸಮಾನವಾದ ನಿನ್ನಡಿಯು ಜೊತೆ ತನ್ನ ಕನಸಿನ ಮೂಲಕವೇ ನಡೆದುಕೊಳ್ಳುತ್ತಾಳೆ ಆದರೆ ಇವಳ ಕನಸುಗಳ ಜಗತ್ತು ಇಷ್ಟೇ ಆಗಿಲ್ಲದೇ ಮುಂದುವರಿದು ''ನಿನ್ನ ಮನೆಗೂಂದು ದೆವ್ವದಂತೆ ಹದ್ದು ಬರುತ್ತದೆ. ಹುಷಾರಾಗಿರು. ಎಂದಾಗ 'ದೆವ್ವನಂಥ ಹದ್ದು ? ಅದು ಹ್ಯಾಗಿರುತ್ತದೆ ? ಎಂದಿದ್ದಳು. 'ಕಪ್ಪಗಿರುತ್ತದೆ ನಕ್ಕರೂ ಅತ್ತರೂ ಕೋಪಗೊಂಡರೂ ಹಲ್ಲು ಕಿರಿಯುತ್ತದೆ''[15] ಮುಂದೆ ಬರಲಿರುವ ಆಕ್ರಮಣದ ಅಡೆ-ತಡೆಗಳು, ಪ್ರತಿರೋಧವು ವ್ಯಕ್ತವಾಗುವುದನ್ನು ಈ ಕನಸುಗಳು ಮಂಡಿಸುತ್ತವೆ. ಕನಸುಗಳೇ ಇಲ್ಲಿ ಪಾತ್ರಗಳಾಗಿ ಕಾರ್ಯನಿರ್ವಹಿಸುತ್ತವೆ. ಮತ್ತೆ ಗೌರಿ ತನ್ನ ಕನಸುಗಳ ಜೊತೆ ಮಾತಾಡುತ್ತಾ ಆ ಹದ್ದು ಹೆಂಗಿರುತ್ತದೆ? ಅಂತ ಕೇಳಿದಳು. '' ಆಕಾಶದ ನೀಲಿಮದಲ್ಲಿ ಅಡಗಿ ಹೊಂಚಿರ್ತದೆ. ನೀನು ಮೈಮರೆತಾಗ ಸದ್ದಿಲ್ಲದೆ ಎಗರಿ ಕಚ್ಚಿಕೊಂಡು ಹೋಗುತ್ತದೆ. ಅದಕ್ಕೇ ಹೊರಕ್ಕೇ ಹೊರಟಾಗ ಕೈಯಲೊಂದು ಕುಡುಗೋಲು ಹಿಡಿದಿರು. ಅದಗು ಎರಗುವುದಕ್ಕೆ ಬಂದಾಗ ಬಿರುಗಾಳಿ ಬೀಸುತ್ತದೆ ಅದೇ ಗುರುತು ತಕ್ಷಣ ಕುಡುಗೋಲು ಹಿಡಿದು ಸಿದ್ಧಳಾಗು''[16] ಗೌರಿಯು ಈ ಕನಸುಗಳು ಮುಂದೆ ಶಿಖರಸೂರ್ಯ ಹದ್ದಾಗಿ ಕನಕಪುರಿಯ ಆಕ್ರಮಣ ಮಾಡುವುದನ್ನು ಸೂಚಿಸುತ್ತಿದೆ ಮತ್ತು ಗೌರಿಗೆ ಮಾರಕವಾಗುವ ಸಂಗತಿಗಳು ಕೂಡಾ ಈ ಕನಸುಗಳು ಹೇಳುತ್ತಿವೆ.

ಶಿಖರ ಸೂರ್ಯದ ಕನಕಪುರಿಯು ಕೂಡಾ ಒಂದು ಆಧುನಿಕ ಮಿಥ್‌ನಿಂದ ಕೂಡಿರುವಂತ್ತದು. ಕ್ಷಣಾರ್ಧದಲ್ಲೇ ಎಲ್ಲವೂ ಕೂಡಾ ಅದಲುಬದಲಾಗುವ, ಕ್ಷಣಿಕ ಭೋಗದ ಜೀವನವು ಪಲ್ಲಟಗಳು ನವಪುರಾಣದ ನೆಲೆಗಳಾಗಿ ಗುರುತಿಸಬಹುದು. ಕನಕಪುರಿಯನ್ನು ಸೃಷ್ಟಿಸುವ ಕಂಬಾರರು ಆಧುನಿಕತೆಯ ಬೆರಗಿನ ಬೇರೆ ಬೇರೆ ಸ್ತರಗಳನ್ನು ಪ್ರಕಟಗೊಳಿಸಿದ್ದಾರೆ. ನವಪುರಾಣಗಳಾದ ಜಾಹಿರಾತುಗಳು, ಚಲನಚಿತ್ರಗಳು, ಧಾರವಾಹಿಗಳು ಸೃಷ್ಟಿಸುತ್ತಿರುವ ಮಿಥ್‌ಗಳನ್ನು ಒಪ್ಪಿಕೊಳ್ಳುವ ಜನರು, ಪುರಾಣಗಳನ್ನು ಕೂಡಾ ಹಾಗೇ ಪ್ರಜ್ಞಾಪೂರ್ವಕವಾಗಿ ಒಪ್ಪಿಕೊಳ್ಳುತ್ತಾರೆ. ಆದರೆ ವಾಸ್ತವದ ನೆಲೆಯಲ್ಲಿ ಈ ಪುರಾಣಗಳು ವಹಿಸುವ ಪಾತ್ರವು ಕೂಡಾ ಹೆಚ್ಚು ಸಂಕೀರ್ಣತೆಯಿಂದ ಕೂಡಿರುವಂತದ್ದು. ಗೌರಿಯು ತನ್ನ ಮೂಲನೆಲೆಯಾದ ಶಿವಾಪುರಕ್ಕೆ ಕೈಗೊಳ್ಳುವ ಪ್ರಯಾಣವು ಮಹಾಕಾವ್ಯಗಳ ನಾಯಕರು ಮಾಡುವ ಸಾಹಸಯಾತ್ರೆಯಂತೆ ಕಾಣುತ್ತದೆ. ಪ್ರತಿ ಊರನ್ನು ತಲುಪುವಲ್ಲಿ ಹೇಳುವ ಕಥೆಗಳು ಕೂಡಾ ಭಯವನ್ನು ಮೀರುವ ಪ್ರೀತಿ, ವಿಶ್ವಾಸ, ನಿಸ್ವಾರ್ಥಗಳನ್ನು

ವ್ಯಕ್ತಪಡಿಸುವ ತಾಯಿಮೌಲ್ಯಗಳ ಪುರಸ್ಕಾರ, ವಾಸ್ತವದ ನೆಲೆಯನ್ನು ಕಂಡುಕೊಳ್ಳುವ ಅನೇಕ ನೆಲೆಗಳು ಇಲ್ಲಿವೆ. ಇಲ್ಲಿ ಬರುವ ಕಥೆಗಳು ಈಗಾಗಲೇ ಇರುವ ಜಾನಪದ, ಪುರಾಣದ ಕಥೆಗಳಾಗಿವೆ. ಆದರೂ ಕೂಡಾ ಅವು ಇಲ್ಲಿ ಬೇರೆಯೇ ಆದ ನೆಲೆಯನ್ನು ಕಂಡುಕೊಂಡಿವೆ. ಜೀವ ಜಗತ್ತು ಸೃಷ್ಟಿಯಾಗುವ ಕಥೆ ಇಲ್ಲಿಯೂ ಕೂಡಾ ಮತ್ತೆ ಬಂದಿವೆ ಮತ್ತು ನಂತರದ ಎಲ್ಲಾ ಕಥೆಗಳಲ್ಲಿ ತಾಯಿಯ ಮೌಲ್ಯಗಳು ಧಾರ್ಮಿಕ ಪುರಾಣದ ನೆಲೆಗಳನ್ನು ಮೀರಿ ಈ ಲೋಕದ ನೆಲೆಯಲ್ಲಿ ರೂಪುಗೊಂಡಿವೆ. 'ಪರಶುರಾಮನ ಕಥೆಯು ಮೂಲಕ್ಕಿಂತ ಇಲ್ಲಿ ಬೇರೆಯೇ ರೀತಿಯಾಗಿ ರೂಪುಗೊಂಡಿವೆ. ತಂದೆಯ ಆಜ್ಞೆಯಂತೆ ಚಿತ್ತ ಚಂಚಲವಾದ ತಾಯಿಯನ್ನು ಕೊಲ್ಲುವ ಭರದಲ್ಲಿ ಮಾತಂಗಿಯ ತಲೆಯನ್ನು ಕಡಿಯುತ್ತಾನೆ. ಪರಶುರಾಮ ನಂತರ ತಂದೆಯ ವರದಿಂದಲೇ ಇವರಿಬ್ಬರೂ ಬದುಕುವಂತೆ ಮಾಡುತ್ತಾನೆ. ಆದರೆ ಇಲ್ಲಿ ಸಣ್ಣ ತಪ್ಪಾಗುತ್ತದೆ. ''ಎರಡು ತಲೆಗಳನ್ನು ಇಬ್ಬರ ದೇಹಗಳಿಗೆ ಅಂಟಿಸಿ ಈ ಮಂತ್ರಜಲ ಸಿಂಪಡಿಸೆಂದು ಕಮಂಡಲು ಕೊಟ್ಟ. ಪರಶುರಾಮ ಸಡಗರದಿಂದ ಇಬ್ಬರ ತಲೆ ತಗೊಂಡು ಜೋಡಿಸಿ ಮಂತ್ರಜಲ ಸಿಂಪಡಿಸಿದ. ಇಬ್ಬರಿಗೂ ಜೀವ ಬಂತು. ನೋಡಿದರೆ ಅವಸರದಲ್ಲಿ ತಲೆ ಅದಲು ಬದಲಾಗಿ ಮಾತಂಗಿಯ ತಲೆ ರೇಣುಕೆಗೂ ರೇಣುಕೆಯ ತಲೆ ಮಾತಂಗಿಗೂ ಅಂಟಿಕೊಂಡಿದ್ದವು.[17] ಈ ಪ್ರಸಂಗ ಗಿರೀಶ್ ಕಾರ್ನಾಡರ 'ಹಯವದನ' ನಾಟಕವನ್ನು ನೆನಪಿಗೆ ತರುತ್ತದೆ. ಆದರೆ ಕಂಬಾರರು ಈ ಕಥೆಯನ್ನು ಪುರುಷಧಿಕಾರದ ವಿರುದ್ಧ ನೆಲೆಯಲ್ಲಿ ಗ್ರಹಿಸಿದ್ದಾರೆ ಮತ್ತು ಪರಶುರಾಮನ ಅವಿವೇಕಿತನವನ್ನು ಹೇಳುತ್ತದೆ. ಇಂತಹ ಕಥೆಗಳು ಗುಚ್ಛವೇ ಗೌರಿಯ ಯಾತ್ರೆಯಲ್ಲಿ ಬಂದು ಹೋಗುತ್ತವೆ.

ಶಿಖರ ಸೂರ್ಯದಲ್ಲಿನ ಗೌರಿಯ ಯಾತ್ರೆಯು ತುಂಬಾ ಈ ರೀತಿಯ ಪುರಾಣಕಥೆಗಳಿದ್ದರೂ ಕೂಡಾ ಅದನ್ನು ವರ್ತಮಾನದ ಸಂಗತಿಗಳೊಂದಿಗೆ ಮತ್ತು ಈ ಕೃತಿಯು ಪ್ರತಿಪಾದಿಸುವ ಮುಖ್ಯ ನೆಲೆಯಾದ ಮಾತೃ ಸಂಸ್ಕೃತಿಯನ್ನೇ ಎತ್ತಿಹಿಡಿಯುವಂತದ್ದಾಗಿದೆ. ಇಲ್ಲಿ ಬರುವ 'ಪುಣ್ಯಕೋಟಿ'ಯ ಕಥೆಯು ಕೂಡಾ ಮೂಲವನ್ನೇ ಬದಲಾಯಿಸಿದೆ. ಕರಿಮಾಯಿಯ ಕಥೆ ಎಲ್ಲವೂ ಮೂಲ ಆಶಯಕ್ಕೆ ಒಳಗಾಗದೇ ಇರುವುದನ್ನು ಕಾಣಬಹುದು. ಇಂತಹ ಕಥೆಗಳ ಮೂಲಕವೇ ಒಂದು ಭಿನ್ನ ಜಗತ್ತು ಕಾದಂಬರಿಯೊಳಗೆ ಸೃಷ್ಟಿಯಾಗಿದೆ. ಗೌರಿಯ ಈ ಕಾದಂಬರಿಯಲ್ಲಿ ಮುಖ್ಯವಾಗಿ ಚಕೋರಿಯ ಬಹಿರ್‌ರೂಪ ಪ್ರಕಟಗೊಂಡಿರುವುದನ್ನು ಕಾಣಬಹುದು. ಪಕ್ಷಿಯ ರೂಪವಾಗಿದ್ದವಳು ಈ ಕಾದಂಬರಿಯ ಉದ್ದಕ್ಕೂ ಉತ್ಸಾಹ, ಲವಲವಿಕೆ, ಪ್ರೀತಿವಿಶ್ವಾಸಗಳ ರೂಪುವಾಗಿ ಪ್ರಕಟಗೊಂಡಿದ್ದಾಳೆ.

ಶಿಖರಸೂರ್ಯದ ಶಿವಾಪುರ ಅನಾಧುನಿಕ ಜಗತ್ತಿನ ಮುಖ್ಯ ರೂಪಕವಾಗಿದೆ. ಹಾಗೆಯೇ ಇದು ಒಳಗೊಳ್ಳುವ ಅಲೌಕಿಕ ಜಗತ್ತು ತಾಂತ್ರಿಕ ಜಗತ್ತ, ವೈದ್ಯವಿದ್ಯೆ, ಅಮರತ್ವಗೊಳಿಸುವ ಹಂಬಲಗಳು, ಇರುವ ಲೋಕವಿದು. ಇಂತಹ ಲೋಕ ವಾಸ್ತವವಲ್ಲದ ವಾಸ್ತವಿಕತೆಯನ್ನು ಪಡೆದುಕೊಂಡಿದೆ. ತನ್ನದೇ ಆದ ದೈವ ಜಗತ್ತನ್ನು ಸೃಷ್ಟಿಸಬಲ್ಲ ಅದರ ಜೊತೆ ಸಂವಾದಿಸಬಲ್ಲ ಒಳಗೊಳ್ಳಬಲ್ಲ ಲೋಕವನ್ನು ಶಿವಾಪುರದಲ್ಲಿ ಕಾಣಬಹುದು. ಶಿಖರಸೂರ್ಯನು ಕೂಡಾ ಇಂತಹ ಜಗತ್ತಿನ ಜೊತೆ ಸಂಪರ್ಕವಿಟ್ಟುಕೊಂಡು ಇದನ್ನು ಮೀರಿ ಬೇರೊಂದು ಜಗತ್ತನ್ನೇ ಕನಕಪುರಿಯಲ್ಲಿ ಸೃಷ್ಟಿಸಿದವನು. ವಿಷ ವಿದ್ಯೆ, ವೈದ್ಯ ದ್ಯಾನವನ್ನು ಚಿನ್ನವಾಗಿಸಬಲ್ಲ ಕುತಂತ್ರದ ಮೂಲಕವೇ ದುರಂತತೆಯ ಕಡೆಗೆ ಸಾಗುವವನು. ಕಾದಂಬರಿಯ ಮೇಲನೋಟಕ್ಕೆ ಗೆಲುವಿನ ಹಾಗೆ ಕಂಡರೂ ಅಂತಿಮವಾಗಿ ಎಲ್ಲಾ ದುರಂತನಾಯಕರ ಸ್ಥಿತಿ ತಲುಪುತ್ತಾನೆ. 'ಹದ್ದಿನಕೊಳ್ಳ'ಎಂಬ ಲೋಕವನ್ನು ಪ್ರವೇಶಿಸುವ ಅಲ್ಲಿಯೇ ತನ್ನೆಲ್ಲಾ ವಿದ್ಯೆಯನ್ನು ಪಡೆಯುವುದು ಆದರೆ ಈ ಲೋಕವು ಕೂಡಾ ನಮ್ಮದಲ್ಲದ್ದು ಇದನ್ನು ಇಂದಿನ ಅಮೇರಿಕಾದಂತ ರಾಕ್ಷಸಿ ಪ್ರವೃತ್ತಿಯಿರುವ, ಸಂಪತ್ತಿನ ಬೆನ್ನಟ್ಟಿ ಯುದ್ಧಕೊರವಾಗಿರುವ ನೆಲೆಯು ಈ ಹದ್ದಿನ ಕೊಳ್ಳವಾಗಿದೆ. ಇಂತಹ ಲೋಕದೊಂದಿಗಿನ ಮಾತುಕತೆ ನೆಲೆಯು ಈ ಹದ್ದಿನಕೊಳ್ಳವಾಗಿದೆ. ಇಂತಹ ಲೋಕದೊಂದಿಗಿನ ಮಾತುಕತೆಗಳು ಕಾದಂಬರಿಯಲ್ಲಿ ಪುರಾಣಗಳು ಮತ್ತೆ ಮತ್ತೆ ತಳೆಯುವ ರೂಪಗಳನ್ನು ವಿವರಿಸಿಕೊಳ್ಳಬಹುದು. ಹದ್ದಿನ ರೂಪವಿರುವ ಹುಡುಗನ ಜೊತೆಗಿನ ಮಾತುಕತೆಗಳು ಇವತ್ತಿನ ಕಾಲದಲ್ಲಿ ಇರುವ ನಿಯಂತ್ರಕ ಶಕ್ತಿಗಳಾದ ಅಧಿಕಾರ ಮತ್ತು ಶಕ್ತಿಯನ್ನೇ ಪ್ರತಿಪಾದಿಸುತ್ತವೆ. ಶಿಖರ ಸೂರ್ಯನೇ ಹೇಳುವ ಹಾಗೆ ''ಹದ್ದು ಶಕ್ತಿ ಮತ್ತು ಅಧಿಕಾರ ಕೊಡುತ್ತದೆ''. ಸ್ವಂತ ಶಿಖರಸೂರ್ಯನೇ ಈ ಹದ್ದಿನ ರೂಪಿತವನು ಮತ್ತು ಹೊಸ ಮಿಥ್‌ಗಳನ್ನು , ಪುರಾಣಗಳನ್ನು ಸೃಷ್ಟಿಮಾಡಬಲ್ಲ ತಾಕತ್ತುಉಳ್ಳವು.

ಶಿಖರಸೂರ್ಯನು ತಾನು ಸೃಷ್ಠಿಮಾಡುವ ಕೃತಕ ಚಿನ್ನ ಮತ್ತು ಸೈನಿಕರ ವಿದ್ಯೆ ಈಗಾಗಲೇ ಹದ್ದಾಗಿಸುವ ನಾಗಾರ್ಜುನನಿಂದ ಶಿಖರಸೂರ್ಯನಿಗೆ ಈ ವಿದ್ಯೆಯ ಬಂದ ಮೇಲೆ ಮತ್ತೆ ನಾಗಾರ್ಜುನ ಇದರಿಂದ ಮುಕ್ತಿಗೊಳ್ಳುವನು. ಆದರೆ ಈ ವಿದ್ಯೆಯನ್ನು ಕಲಿಯುವ ಶಿಖರಸೂರ್ಯನ ಕೂಡಾ ಹದ್ದಾಗಿಯೇ ರೂಪುಗೊಳ್ಳಬೇಕಾದವನು. ನಾಗಾರ್ಜುನನ ಈ ಮಾತುಗಳನ್ನು ಗಮನಿಸಬಹುದು. ''ಧಾನ್ಯವನ್ನು ಚಿನ್ನ ಮಾಡಿದಾಗಲೇ ಮೇವಿನಿಂದ ಸೈನ್ಯ ಮಾಡಿದಾಗಲೇ ನಿನ್ನ ಮನುಷ್ಯತ್ವ ಹೋಯಿತು''

" ನಾ ಕೊಡುವ ಮಂತ್ರಕ್ಕೆ ಯಾರಾದರೂ ತಿರುಮಂತ್ರ ಹಾಕಿದರೆ - ಅದೇ ನಿನ್ನ ವಿದ್ಯೆಯ ಕೊನೆ. ಆ ಕ್ಷಣವೇ ನಿನ್ನೆಲ್ಲ ಸೃಷ್ಠಿ ಮೂಲರೂಪಕ್ಕೇ ತಿರುಗುತ್ತಾರೆ. ಹುಷಾರ್. ಆಮೇಲೆ ಗರುಡನ ಬೆಟ್ಟ ಹತ್ತಿಬರುವ ಯಾವನಿಗಾದರೂ ಆ ವಿದ್ಯೆಯನ್ನು ಬೋಧಿಸಿದಾಗಲೇ ನಿನಗೆ ಮುಕ್ತಿ. ಅಲ್ಲಿಯವರೆಗೆ ಹದ್ದಾಗಿ ಬೆಟ್ಟ ಕಾಯುವುದೇ ನಿನ್ನ ಗತಿ. ಇದೇ ಶಾಪ.[18] ಶಿಖರಸೂರ್ಯರು ವಿದ್ಯೆಗೆ ಪ್ರತಿಯಾಗಿಯೇ ಶಿವಾಪುರದ ನಿನ್ನಡಿಯು ಕೂಡಾ ಇಂತಹ ವಿದ್ಯೆಯ ಬಗ್ಗೆ ಅತ್ಯುತ್ಸಾಹನಾಗಿರುತ್ತಾನೆ. ಶಿವಪಾದನಿಂದಲೇ ಕಲಿತ ಈ ವಿದ್ಯೆಯನ್ನು ತಾನು ಕೂಡಾ ಪ್ರಯೋಗ ಮಾಡುತ್ತಾನೆ. ಆದರೆ ಬೆಳ್ಳಿಯು ಅವನನ್ನು ಎಚ್ಚರಗೊಳಿಸುತ್ತಾಳೆ." ಮಗಾ, ಉಣ್ಣೋ ಅನ್ನ ದನಿನ ಮೇವು ಹಾಳ್ಮಾಡಬಾರದು ನನ್ನಪ್ಪಾ. ಈ ವಿದ್ಯೆ ನಿನಗಲ್ಲ" ತಕ್ಷಣವೇ ನಿನ್ನಡಿಯು ಅಹಂಕಾರ ತಿಳಿಯುತ್ತದೆ. ಶಿವಪಾದನಲ್ಲಿ 'ಮನುಷ್ಯರು ತಿನ್ನೋ ಅನ್ನ ದನ ತಿನ್ನೋ ಹುಲ್ಲು ಕಸಿದು ಕೊಂಬಂದು ಚಿನ್ನ. ಸೈನ್ಯ ಮಾಡಿಟ್ಟರೆ ಎದಕ್ಕೆ ಬಂತು ನನ್ನಯ್ಯಾ ? ಚಿನ್ನವನ್ನು ಪುನಃ ಧಾನ್ಯವಾಗಿಸುವ ಸೈನಿಕರನ್ನು ಪುನಃ ಹುಲ್ಲು ಮಾಡೋ ವಿದ್ಯೆ ಕೊಡು ತಂದೆ" [19] ಶಿಖರಸೂರ್ಯನು ಸೃಷ್ಟಿಮಾಡುವ ಕೃತಕ ಚಿನ್ನ ಸೈನಿಕರಿಗೆ ಪ್ರತಿಯಾಗಿ ನಿನ್ನಡಿಯ ಈ ವಿದ್ಯೆಯ ಮುಖಾಮುಖಿಯಲ್ಲಿ ಕೇಡು ಮತ್ತು ಒಳ್ಳೆಯ ಅಧಿಕಾರ ಮತ್ತು ನಿಸ್ವಾರ್ಥತೆ. ಸಮುದಾಯ ಮತ್ತು ವ್ಯಕ್ತಿಗತ ನೆಲೆಯ ಕ್ರಮಗಳನ್ನು ಕಾಣಬಹುದಾಗಿದೆ. ಶಿಖರ ಸೂರ್ಯ ಸೃಷ್ಠಿ ಮಾಡುವುದಕ್ಕೆ ಪ್ರತಿಸೃಷ್ಠಿಯಾಗುವುದು ಇದೇ ಕಾದಂಬರಿಯ ಮುಖ್ಯ ನೆಲೆಯಾಗಿದೆ.



ಕಾದಂಬರಿಯ ಶಕ್ತಿ ಇರುವುದು ಅದು ಚಲಿಸುವ ಅನೇಕ ಜಗತ್ತುಗಳೊಂದಿಗಿನ ಒಡನಾಟದಲ್ಲಿ ಶಿವಾಪುರದಿಂದ ಕನಕಗಿರಿ ಕಂಚಿ ಹದ್ದಿನಕೊಳ್ಳ, ಬೆಟ್ಟ, ದೈವಜಗತ್ತುಗಳ ನಡುವೆ ನಡೆಯುವ ಈ ಕಾದಂಬರಿಯು ಕೊನೆಯಲ್ಲಿಯೂ ಮತ್ತೆ ಹೊಸ ಪುರಾಣವು ಸೃಷ್ಟಿಯಾಗಬಲ್ಲದು ಎಂಬ ಸೂಚನೆಯನ್ನು ನೀಡುವುದರೊಂದಿಗೆ ಮುಕ್ತಾಯಗೊಳ್ಳುತ್ತದೆ. ಆದರೆ ಇದು ಅಂತಿಮದಲ್ಲಿ ಎಂಬುದನ್ನು ಈ ಸಾಲುಗಳು ಧ್ವನಿಸುತ್ತವೆ. ಶಿಖರ ಸೂರ್ಯ ತನ್ನ ಪ್ರಜೆಗಳಿಂದಲೇ ತಪ್ಪಿಸಿಕೊಂಡು ಮನೆಯ ಶಿಖರದ ಮೇಲೆ ನಿಂತಿರುವ ಸಂದರ್ಭದಲ್ಲಿಯೇ ಕೋಪ, ನಿರಾಸೆ, ಆಘಾತಗಳನ್ನು ತಡೆದುಕೊಳ್ಳಲಾರದೇ ಕಣ್ಣು ಮುಚ್ಚಿ ಕೈ ಬಿಟ್ಟು ಕಳಸವನ್ನೊದ್ದು ಹಾರಿಯೇ ಬಿಟ್ಟ. ಜನ ಹೋ ಎಂದು ಕಿರಿಚಿದರು. ಎರಡೂ ಕೈ ಕಾಲು ಚಾಚಿ ಬೀಳುವಾಗ ಕೆಳಗಿನವರಿಗೆ ನಿಧಾನ ಹಾರುವ ಹದ್ದಿನಂತೆ ಕಂಡ". ರೆಕ್ಕೆ ಬೀಸುತ್ತ ಪಡುವಣದ ಗರುಡನ ಗಿರಿಯ ಕಡೆಗೆ ಮುಖ ಮಾಡಿ ಹಾರುತ್ತ ಹಾರುತ್ತಾ

ಕನಕಪುರಿಯಾಚೆಗಿನ ಇನ್ನೊಂದು ಅಂತರಿಕ್ಷದಲ್ಲಿ ಮಾಯವಾದ''[20] ಈ ಸಾಲುಗಳು ಮತ್ತೆ ಬರಬಹುದಾದ ಹದ್ದನ್ನು ಕುರಿತು ಹೇಳುತ್ತವೆ ಅಥವಾ ಮತ್ತೆಲ್ಲೋ ಇದು ಪ್ರತ್ಯಕ್ಷಗೊಂಡಿರಬೇಕು.

ಇದುವರೆವಿಗೂ ನಡೆದ ಈ ಮೇಲಿನ ವಿಶ್ಲೇಷಣೆಯಿಂದ ಚಕೋರಿ ಮತ್ತು ಶಿಖರಸೂರ್ಯ ಕೃತಿಗಳಲ್ಲಿ ರೂಪಿತಗೊಂಡಿರುವ ಆದಿಮ ಜಗತ್ತಿನ ಪುರಾಣಗಳ ಅದಕ್ಕೆ ಪರ್ಯಾಯವಾಗಿ ನವಜಗತ್ತಿನ ಪುರಾಣದ ನೆಲೆಗಳು ಹೇಗೆ ಮುಖಾಮುಖಿಯಾಗುತ್ತವೆ ಎಂಬುದನ್ನು ಕಾಣಬಹುದು. ಕಂಬಾರರು ಯಾವುದೇ ವಸ್ತುವನ್ನು ಆಯ್ಕೆ ಮಾಡಿಕೊಂಡರು. ಅದಕ್ಕೆ ಪುರಾಣದ ಸ್ಪರ್ಶತೆಯನ್ನು ನೀಡುತ್ತಾರೆ ಎಂಬುದಕ್ಕೆ ಶಿಖರಸೂರ್ಯ ಕಾದಂಬರಿಯೇ ಸಾಕ್ಷಿ. ಪ್ರಾರಂಭದಲ್ಲಿ ಇತಿಹಾಸದ ಕಥೆಯನ್ನು ಹೇಳಹೊರಟವರಿಗೆ ಜಾನಪದ, ಪುರಾಣ, ಅನಾಧುನಿಕ ಜಗತ್ತುಗಳು, ಎಲ್ಲವನ್ನು ಇದರಲ್ಲಿ ಬಳಸಿಕೊಳ್ಳುತ್ತಾರೆ. ಅಥವಾ ಚರಿತ್ರೆಯನ್ನೇ ಒಂದು ಹೊಸ ಪುರಾಣದ ನೆಲೆಗೆ ತಂದು ನಿಲ್ಲಿಸುತ್ತಾರೆ. ಚರಿತ್ರೆಯೆಂಬುದನ್ನು ದರ್ಪದ, ಅಧಿಕಾರದ, ಅಹಂಕಾರದ ನೆಲೆಯಲ್ಲಿ ಗ್ರಹಿಸುವ ಕಂಬಾರರು ಪುರಾಣಗಳ ಮೂಲಕವೇ ತಮ್ಮ ಎಂದಿನ 'ಶಿವಾಪುರ'ದ ರೂಪಕಕ್ಕೇ ವಾಪಸ್ಸಾಗುತ್ತಾರೆ. ಚರಿತ್ರೆಯನ್ನು ಹೇಳಹೊರಟ ಚರಿತ್ರೆಕಾರರ ಮಾಡಿರುವ ನಿರೂಪಣಾ ಕ್ರಮದ ಬಗ್ಗೆ ಮುಂದಿನ ಅಧ್ಯಾಯದಲ್ಲಿ ಚರ್ಚಿಸಲಾಗುವುದು.

ಕೊನೆಟಿಪ್ಪಣಿ

1. ಡಾ. ಜಯಪ್ರಕಾಶ್ ಮಾವಿನಕುಳಿ, (ಸಂಪಾದಕರು) ಶಿವಾಪುರ ಕಂಬಾರ ನಮಸ್ಕಾರ, ಪುಟ-15.
2. ಕೆ.ಎನ್. ತಿಲಕ್‌ಕುಮಾರ್, ಮಯೂರ ತಿಂಗಳ ಪತ್ರಿಕೆ (ಸಂದರ್ಶನ ಬಸವರಾಜ ಕಲ್ಗುಡಿ)
3. ಚಂದ್ರಶೇಖರ ಕಂಬಾರ, ಚಕೋರಿ, ಪುಟ-28.
4. ಅದೇ ಪುಟ-36
5. ಅದೇ ಪುಟ-57
6. ಅದೇ ಪುಟ-59
7. ಅದೇ ಪುಟ-76
8. ಅದೇ ಪುಟ-78
9. ಅದೇ ಪುಟ-80
10. ಅದೇ ಪುಟ-81
11 ಅದೇ ಪುಟ-85
12. ಕೆ.ಎನ್. ತಿಲಕ್‌ಕುಮಾರ್ (ಸಂಪಾದಕರು) ಮಯೂರ ತಿಂಗಳ ಪತ್ರಿಕೆ, ಸಂದರ್ಶನ: ಬಸವರಾಜ ಕಲ್ಗುಡಿ
13. ಚಂದ್ರಶೇಖರ ಕಂಬಾರ, ಶಿಖರಸೂರ್ಯ, ಪುಟ-23.
14. ಅದೇ ಪುಟ-210
15. ಅದೇ ಪುಟ-239
16. ಅದೇ ಪುಟ-239
17. ಅದೇ ಪುಟ-321
18. ಅದೇ ಪುಟ-249
19. ಅದೇ ಪುಟ-207
20. ಅದೇ ಪುಟ-411

# ಅಧ್ಯಾಯ -5

## ಸ್ತ್ರೀ ಪ್ರಕಟಗೊಳ್ಳುವ ವಿವಿಧ ನೆಲೆಗಳು

ಕನ್ನಡದ ಮುಖ್ಯ ನವ್ಯ ಕಾದಂಬರಿಕಾರರು ಹೆಣ್ಣಿನ ಬಗೆಗಿನ ಧೋರಣೆಗಳು ಒಂದು ಕಾಮದ ದೃಷ್ಠಿಯಿಂದ ನೋಡಿದವರು, ಇಲ್ಲವೇ ಕೇವಲ ಅವಳ ದೇಹದ ವರ್ಣನೆಯ ಬಗ್ಗೆ ಬರೆದವರು. ಅದಕ್ಕೆ ಅಪವಾದವೆಂಬಂತೆ ತೇಜಸ್ವಿ, ಕಂಬಾರರು ಬೇರೆಯಾಗಿಯೇ ಹೆಣ್ಣಿನ ಬಗೆಗಿನ ನಿಲುವುಗಳನ್ನು ಹೊಂದಿದವರು. ಲಂಕೇಶರ ಕಾದಂಬರಿ, ಕಥೆಗಳಲ್ಲಿ ಬರುವ ಹೆಣ್ಣುಗಳು ಪ್ರತಿಭಟನೆಯ ಮೂಲಕವೇ ತಮ್ಮ ಅಸ್ತಿತ್ವವನ್ನು ಕಂಡಕೊಂಡವು. ಆದರೆ ಇದೇ ಕಾಲದ ಅನೇಕ ಸ್ತ್ರೀ ಲೇಖರು ಕೂಡಾ ಸ್ತ್ರೀವಾದೀ ಧೋರಣೆಯನ್ನು ಉಳ್ಳ ಸ್ತ್ರೀವಾದಿ ವಿಮರ್ಶೆಯ ಮೂಲಕ ಹೆಣ್ಣಿನ ನೆಲೆಗಳನ್ನು ಗ್ರಹಿಸಲು ಯತ್ನಿಸಿದವರು. ಸ್ತ್ರೀವಾದಗಳು ಮಂಡಿಸುವ ಸ್ತ್ರೀವಾದೀ ವಿಮರ್ಶಾಧೋರಣೆಗಳು, ಸ್ತ್ರೀವಾದಿ ತಾತ್ವಿಕತೆಯ ನೆಲೆಯಿಂದ ಕಂಬಾರರ ಕೃತಿಗಳ ಹೆಣ್ಣಿನ ಪಾತ್ರಗಳನ್ನು ವಿಶ್ಲೇಷಿಸಲು ಸಾಧ್ಯವಾಗುವುದು ಅನುಮಾನವೇ. ಏಕೆಂದರೆ ಅವರ ಸಿಂಗಾರವ್ವ ಮತ್ತು ಅರಮನೆಯ ಕಾದಂಬರಿ ಸಿಂಗಾರೆವ್ವ, ಜೋಕುಮಾರಸ್ವಾಮಿಯ ಗೌಡ್ತಿ, ಶಾರಿ, ಕರಿಮಾಯಿಯಂತಹ ಪಾತ್ರಗಳು ಪುರಾಣದ ಜೊತೆ ಅಥವಾ ಆಚರಣೆಗಳ ಜೊತೆ ತಳಕನ್ನು ಹಾಕಿಕೊಂಡವು. ಆದರೆ ಸಿಂಗಾರವ್ವ ಮಾತ್ರ ತನ್ನ ಗಂಡನಾದ ದೇಸಾಯಿ ಷಂಡತನದಿಂದ ಹೊಲೆಯನ ಜೊತೆ ಸಂಬಂಧ ಬೆಳೆಸುವುದು, ಗೌಡ್ತಿ ಬಸಣ್ಣಾನ ಜೊತೆ ಕೂಡುವುದು ಮೇಲು ಪರಂಪರೆಯ ಗಂಡಸಿನ ಮೌಲ್ಯಗಳ ಅಹಂಕಾರಗಳನ್ನು ಮೀರುವ ನೆಲೆಯನ್ನು ಗುರ್ತಿಸಬಹುದು. ಪ್ರಸ್ತುತ ಈ ಅಧ್ಯಾಯದಲ್ಲಿ ಚಕೋರಿ ಮತ್ತು ಶಿಖರಸೂರ್ಯ ಕೃತಿಗಳಲ್ಲಿ ಬರುವ ಸ್ತ್ರೀ ಪಾತ್ರಗಳು ಪ್ರಕಟವಾಗುವ ಬೇರೆ ಬೇರೆ ನೆಲೆಗಳನ್ನು ಅರಿಯುವುದಾಗಿದೆ. ಆದರೆ ಇಂತಹ ಪಾತ್ರಗಳನ್ನು ಅರಿಯುವಲ್ಲಿ ಮುಖ್ಯ ಸಮಸ್ಯೆಯೆಂದರೆ ಇಲ್ಲಿ ಬರುವ ಸ್ತ್ರೀ ಪಾತ್ರಗಳು ಕೆಲವೊಮ್ಮೆ ದೈವವಾಗಿ, ಅಲೌಕಿಕ ಶಕ್ತಿಗಳಾಗಿ ಮಾರ್ಪಡುತ್ತವೆ. ಇಂತಹ ಸಂದರ್ಭದಲ್ಲಿ ನಮ್ಮ ತರ್ಕ ಮೀರಿದ ಸಂಗತಿಗಳು ಹೊರಬರಬಹುದು.

ಚಕೋರಿ ಕೃತಿಯು ಇಲ್ಲಿ ಬರುವ ಲಕ್ಕಬ್ಬೆ ಮತ್ತು ಯಕ್ಷಿಯರ ನಡುವಿನ ಕಥೆಯಾಗಿ ಕಾಣಬಹುದು. ಕಂಬಾರರು ಹೆಣ್ಣನ್ನು ನೋಡುವ ನವ್ಯದ ಸಂಪ್ರದಾಯಿಕ ವರ್ಣನೆಗಳು, ನೆಲೆಗಳನ್ನು ನಿರಾಕರಣೆ ಮಾಡಿವೆ. ಈ ಕೃತಿಯಲ್ಲೂ ಕೂಡಾ ಹೆಣ್ಣು ಕೇವಲ ಕಾಮವಷ್ಟೇ ಅಲ್ಲದೇ ಬದುಕನ್ನು ರೂಪಿಸುವ, ಬೆಳೆಸುವ, ಸಂಬಂಧಗಳನ್ನು ಕೂಡಿಸುವ ಸಲುವಾಗಿಯೇ

ಹೆಣ್ಣನ್ನು ಮುಖ್ಯ ಭಿತ್ತಿಯನ್ನಾಗಿ ಮಾಡಿಕೊಂಡಿದ್ದಾರೆ. ಇಂತಹ ಭಿತ್ತಿಯಲ್ಲಿ ಕೆಲವೊಮ್ಮೆ ಹೆಣ್ಣು ಸಮೃದ್ಧ ಕಾಮ, ಕೇವಲ ಲೈಂಗಿಕತೆಯ ನೆಲೆಯಾದರೂ ಇದೇ ಸೃಷ್ಟಿಯನ್ನು ಸೃಷ್ಟಿಸುವ ಅಂಶವಾಗಿಯೇ ಕಂಡುಬರುತ್ತಾಳೆ.[1] ಕಂಬಾರರು ಹೆಣ್ಣನ್ನು ವರ್ಣನೆ ಮಾಡುವಾಗಲೂ ಕೂಡಾ ನವ್ಯದ ದೃಷ್ಟಿಕೋನದಿಂದ ತುಂಬಾ ಭಿನ್ನವಾಗಿ ಕಂಡಿದ್ದಾರೆ. ಈ ಸಾಲುಗಳನ್ನು ಗಮನಿಸಬಹುದು.'' ನಗುವಾಗಿನ ಅವಳ ದನಿ ಮಾದಕವಾಗಿತ್ತು. ಹಸಿರುಲಂಗ, ಮತ್ತು ಎದೆಯ ಚಿಗುರುಬ್ಬುಗಳನ್ನು ಕೋರೆದಂತೆ ತೋರಿಸುವ ಬಿಳಿ ದಾವಣಿ ಹೊಂದಿದ್ದಳು. ಓಡುತ್ತಿದ್ದಾಗ ಮುಖದ ಮೇಲಿನ ಮುಂಗುರುಳು ಮತ್ತು ಬೆನ್ನಮೇಲಿನ ನೀಳವಾದ ಸಡಿಲ ಜಡೆ ಎಡಬಲ ತೂಗಾಡುತ್ತಿದ್ದವು. ನಗಾಡುವಾಗ ಮಿಂಚಿನಂತೆ ಹೊಳೆದ ಅವಳ ದಂತಪಂಕ್ತಿ ಬಹಳ ಆಕರ್ಷಕವಾಗಿತ್ತು''[1]. ಇಂತಹ ವರ್ಣನೆಗಳಲ್ಲಿ ಎಲ್ಲಿಯೂ ಕೂಡಾ ಕಂಬಾರ ಅತೀ ಎನಿಸುವ ಹೆಣ್ಣಿನ ವರ್ಣನೆಗಳು, ಸಂದರ್ಭಗಳು ಕಾಣಸಿಗುವುದಿಲ್ಲ. ಚಕೋರಿಯಲ್ಲೂ ಕೂಡಾ ಈ ರೀತಿಯ ವರ್ಣನೆಗಳು ಅತಿಯಾಗಿ ಇಲ್ಲದೇ ಇರುವುದನ್ನು ಕಾಣಬಹುದು. ಇಲ್ಲಿ ಬರುವ ಲಕ್ಕಬ್ಬೆ ಇಡೀ ಶಿವಾಪುರ, ಚಂದಮುತ್ತ, ಹಟ್ಟಿಯ ಚೈತನ್ಯವಾಗಿದೆ. ತನ್ನ ಗಂಡನ ನೆನಪುಗಳು ಇಲ್ಲದೆಯೇ ಬದುಕುವ ಮಾತ್ರವಲ್ಲ ಅಂತಹ ಬದುಕಿನಲ್ಲಿ ಚಂದಮುತ್ತನಿಗೆ ರಕ್ತಮಾಂಸಗಳನ್ನು ತುಂಬಬಲ್ಲಳು. ಕಂಬಾರರು ಲ ಕ್ಕಬ್ಬೆಗೆ ಗಂಡನ ನೆನಪು ಇಲ್ಲದಿರುವಂತೆ ಮಾಡಿರುವುದು ಮನುಷ್ಯ ಆದಿಮ ಸ್ಥಿತಿಯಲ್ಲಿ ಹೆಣ್ಣು ಗಂಡಸ್ಸಿನ ಹಂಗಿಲ್ಲದೇ ಸ್ವತಂತ್ರವಾಗಿ ಬದುಕಬಲ್ಲಳು ಎಂಬುದನ್ನು ಹೇಳುವಂತಿದ್ದಾರೆ. ಜೊತೆಗೆ ಚಂದಮುತ್ತನಿಗೆ ಯಕ್ಷಿಯ ಜೊತೆಗಿನ ಸಂಬಂಧವು ಗಂಡಿಗೆ ಅನಿವಾರ್ಯವಾಗಿ ಹೆಣ್ಣು ಬೇಕೆನ್ನುವುದನ್ನು ಹೇಳುತ್ತಿದ್ದ ಹಾಗಿದೆ.

ಲಕ್ಕಬ್ಬೆಯು ಚಂದಮುತ್ತನ ತಾಯಿಯಾಗಿ ಅವನಲ್ಲಿ ಮನೆಯ ಆಚರಣೆಗಳು, ಸಂಪ್ರದಾಯ ವಿಧಿಗಳು, ಅವುಗಳ ಪಾವಿತ್ರತೆ ಎಲ್ಲವನ್ನೂ ತುಂಬುತ್ತಾಳೆ. ಲಕ್ಕಬ್ಬೆಯು ಮುಖ್ಯವಾಗಿ ಆದಿಮಾಯೆ'ಯ ನಕಲು ಅಥವಾ ಪ್ರತಿರೂಪ. ಆದರೆ ಅದಕ್ಕಿಂತ ಭಿನ್ನವಾದ ನೆಲೆಯು ಈ ಲಕ್ಕಬ್ಬೆಗೆ ಇದೆ. ತನ್ನ ಮಗನ ಸುಖ ಸಂತೋಷಗಳನ್ನು ಕಂಡು ಹೆಮ್ಮೆ ಇದೆ. ದುಃಖವಿದೆ ಮಗನಿಗಾಗಿ ಹಂಬಲಿಸುತ್ತಾ ಕಾಯುವ ತಾಳ್ಮೆಯಿದೆ. ಇಂತಹ ತಾಯಿಯೂ ತನ್ನ ಮಗನು ಯಕ್ಷಿಯ ಜೊತೆಗಿನ ಸಂಬಂಧ ಹೊಂದಿದ್ದಾನೆ ಎಂದು ತಿಳಿದು ಹೆಚ್ಚು ಆತಂಕಕ್ಕೆ ಒಳಗಾಗುತ್ತಾಳೆ. ಇದು ಕಾಲ ಕಳೆದಂತೆ ಹೊಸ ದೈವದ ಅವತಾರ''ವಾಗುವುದು ಈ ದೈವದ ಮಡಿ ಬಟ್ಟೆಗಳನ್ನು ಬದಲಾಯಿಸುವ ಪೂಜೆ ತನ್ನಿಂದ ಮಗನನ್ನು ದೂರ ಮಾಡುತ್ತಿರುವ ಯಕ್ಷಿಯ ಬಗೆಗಿನ ಕೋಪ, ಕಿಚ್ಚು ಎಲ್ಲವೂ ಸೇರಿಕೊಂಡಿದೆ.

ಲಕ್ಕಬ್ಬೆಯ ಇಂತಹ ಪುತ್ರನನ್ನು ಕಳೆದುಕೊಳ್ಳುವ ದುಃಖ ಒಂದು ಕಡೆಯಾದರೆ ದೈವವಾದ ಯಕ್ಷಿಯ ಜೊತೆಗಿನ ಸೇಡು ಮಾಡಿಕೊಳ್ಳುವುದು ಕೆಡುಕೆನಿಸುತ್ತದೆ ಈ ಮಾತುಗಳನ್ನು ಗಮನಿಸಬಹುದು.

''ಕದ ಮುಚ್ಚಿರೇ ಬ್ಯಾಗ ಕನ್ನ ಹಾಕುತ್ತಾಳೆ
ಚಂದ್ರಲೋಕದ ಯಕ್ಷಿ ಬಂದು ಕಂದನ್ನ
ಕಿನ್ನರ ಲೋಕಕೊಯ್ದಳು'' [2]

ಲಕ್ಕಬ್ಬೆಯು ತನ್ನ ಮಗನು ತನ್ನಿಂದ ದೂರವಾದುದರ ಬಗ್ಗೆ ದುಃಖಗೊಳ್ಳುತ್ತಾ ಪುನಃ ತನ್ನ ಮಗನನ್ನು ನೀಡು ಎಂದು ಬೇಡಿಕೊಳ್ಳುತ್ತಾಳೆ. ಯಕ್ಷಿ ತನ್ನ ಮಗನಾದ ಚಂದಮುತ್ತನ ಜೊತೆ ಮದುವೆ, ಮಾಡಿಕೊಂಡಾಗಲೂ ಕೂಡಾ ತನ್ನ ಸೊಸೆಯಾದ ಯಕ್ಷಿಯನ್ನು ಒಪ್ಪಿಕೊಳ್ಳುತ್ತಾಳೆ. ಅವಳಿಗೆ ದೈವವೆನ್ನುವ ಭಯವಾಗಲೀ ಇಲ್ಲ ಅವಳನ್ನು ತುಂಬಾ ಆತ್ಮೀಯತೆಯಿಂದ ಕರೆಯುವ ಈ ಸಾಲುಗಳನ್ನು ನೋಡಬಹುದು.

ನಿನಗ್ಯಾರೂ ಸರಿಯಾಗದ ಸೊಸೆಮುದ್ದೇ
ಬಳಗವೆಲ್ಲವ ತೊರೆದು ಮಗನ ಬಳಿ ಬಂದೆ
ನರಲೋಕದ ನಡಾವಳಿ ನಿನಗರಿದೆ ?
ಮಗಬೇಕು, ಮಗನ ತಾಯಿ ಬ್ಯಾಡೆಂದರೆ ಹ್ಯಾಂಗವ್ವ
ಅವನ ಜೊತೆ ಮಾತನಾಡುತ್ತೀ ನನ್ನೊಂದಿಗ್ಯಾಕಿಲ್ಲ
ನನಗೊಮ್ಮೆ ಬಾಯಿತುಂಬ ಅತ್ತೆ ಅನಬಾರದ ನನ್ನವ್ವ
ಗೊಲ್ಲಕುಲದ ನಡತೆ ಸೇರದೆ ನಿನಗೆ ?''[3]

ಲಕ್ಕಬ್ಬೆಯ ಈ ಸಹಜ ಮಾತುಗಳಲ್ಲಿ ಭಕ್ತಿ, ಸಲಿಗೆ, ಅಧಿಕಾರ ಎಲ್ಲವೂ ಇರುವುದನ್ನು ಕಾಣಬಹುದು. ಆದರೆ ಯಕ್ಷಿಯು ರೂಪಪಡೆದು ಮಗನೊಂದಿಗೆ ಸಂಸಾರ ಮಾಡಲಾರದವಳು ಮೊಮ್ಮಗನನ್ನು ಪಡೆಯಲಾರದವಳು ಎಂಬ ಸಂಕಟವು ಲಕ್ಕಬ್ಬೆಗೆ ಇದೆ.

ಲಕ್ಕಬ್ಬೆಯು ತನ್ನ ಮಗನು ಹೇಳದೇ ಕೇಳದೇ ಕಣ್ಮರೆಯಾದಾಗಲೂ ಇವಳು ಅನೇಕ ತಳಮಳಕ್ಕೆ ಒಳಗಾಗುತ್ತಾಳೆ. ತನ್ನ ಪ್ರಾಣವಾದ ಚಂದಮುತ್ತನನ್ನು ಮತ್ತೆ ಬರುವ ಹಾಗೇ ಮಾಡು ಎಂದು ಶಿವನಲ್ಲಿ ಮಾಡುವ ಅವಳ ಪ್ರಾರ್ಥನೆಯಲ್ಲಿ ಅವಳ ಮಗನ ಬಗೆಗಿನ ಅತೀವ ಪ್ರೀತಿಯು ವ್ಯಕ್ತವಾಗುತ್ತದೆ.

''ಬರಿದಾದ ನನ್ನ ಭಾಗ್ಯವ ಹಿಂದಿರುಗಿ
ಕೊಡು ಶಿವನೇ ಎಂದು
ಕೊಡದಿದ್ದ ಪಕ್ಷದಲ್ಲಿ
ನಾಲಗೆ ಹಿರಿದು ಪ್ರಾಣ ಬಿಡುವೆನೆಂದು
ಪ್ರಾಣ ಬಿಟ್ಟ ಪಕ್ಷದಲ್ಲಿ
ನಿನಗ್ಯಾರೂ ಕಾಸಿನ ದೀಪ ಹಚ್ಚದಿರಲೆಂದು
ಕೈಯೆತ್ತಿ ಕರ ಮುಗಿಯದಿರಲೆಂದು
ಶಪಿಸುತ್ತ
ಗೋಳು ಗೋಳೆಂದು ಗೋಳಾಡುತ್ತಾಳೆ ತಾಯಿ
ಬಾನು ಕರಗುವಂತೆ
ಬನ ಮರಗುವಂತೆ
ಕಣ್ಣು ತೆರೆದು ನೋಡಾ ಶಿವನೆ ''[4]

ಹೀಗೆ ಕಾಯುವ ತಾಯಿಯು ತನ್ನ ಮಗ ಹಿಂದಿರುಗಿ ಬರದೇ ಇದ್ದಾಗ ಮಾತೃಪ್ರೇಮದ ಶಕ್ತಿಯು ಎಷ್ಟು ಎಂಬುದನ್ನು ಈ ಕೆಳಗಿನ ಸಾಲುಗಳಿಂದ ಗುರ್ತಿಸಬಹುದು. ಯಕ್ಷಿಯ ಶಿಲೆಯ ಮೇಲೆ ಸಗಣಿ ಮತ್ತು ಮೆಣಸಿನ ನೀರನ್ನು ಹುಯ್ದು ತನ್ನ ಪ್ರತಿಭಟನೆಯನ್ನು ಮಾಡುತ್ತಾಳೆ.

''ಎಲಗೆಲ್ಲವೋ ಸೊಗಲಾಡಿ ದೇವೀ
ಹಾಡಿಯ ಬಲ್ಲವಳು ಹಟ್ಟಿಯ ಬಲ್ಲವಳು
ಕಾಡು ನೋಡಿಕೊಂಬೋಳು, ಗೂಡು ನೋಡಿಕೊಂಬೂಳು
ಮುಗಿಲಿನ ಆಚೆ ಬಲ್ಲವಳು ಈಚೆ ಬಲ್ಲವಳು
ಮಗ ಎಲ್ಲಿ ಹೋದ ಅಂಬೋದು
ನಿನಗೆ ಗೊತ್ತಿಲ್ಲ ಅಂದಮ್ಯಾಕೆ
ನೀನ್ಯಾಕೆ ಮೈನಾಗಿರಬೇಕು
ಮಗ ನಿನ್ನ ಪೂಜೆ ಮಾಡಲಿಲ್ಲವ
ಚಾಕರಿ ಮಾಡಲಿಲ್ಲವ''[5]

ಲಕ್ಕಬ್ಬೆಯ ಇಂತಹ ಅಧಿಕಾರಯುತವಾದ ಪ್ರೇಮವು ದೇವತೆಯಾದ ಯಕ್ಷಿಯನ್ನು ಕೂಡಾ ದಹಿಸುವಂತದ್ದು. ಶಿಲೆಯಲ್ಲಿ ಸುರಿದ ಸಗಣಿಯು ಸರಸವಾಡುತ್ತಿದ್ದ ಯಕ್ಷಿಯ ಮೈಯೆಲ್ಲಾ ಉರಿಯಾಗುತ್ತದೆ. ಅಂದರೆ ತಾಯಿಯ ನಿಷ್ಕಲ್ಮಶ ಪ್ರೀತಿಯು ಎಲ್ಲವನ್ನೂ ದಹಿಸಬಲ್ಲದು ಎಂಬುದಕ್ಕೆ ಲಕ್ಕಬ್ಬೆಯೇ ಸಾಕ್ಷಿಯಾಗುತ್ತಾಳೆ.

ಚಂದಮುತ್ತ ಯಕ್ಷಿಯ ಶಿಲೆಯನ್ನು ಶಿಲೆಯಾಗಿಸುವುದರ ಮೂಲಕ ತಾನು ಶಿಲೆಯಾಗುವುದರಲ್ಲಿ ಅರ್ಥಪೂರ್ಣತೆಯನ್ನು ಕಂಡುಕೊಳ್ಳುತ್ತಾನೆ. ಆದರೆ ಇಂತಹ ತಾಯಿಯ ತನ್ನ ಮಗನನ್ನು ಬಿಟ್ಟುಕೊಡುವಲ್ಲಿ ಅನೇಕ ತಲ್ಲಣಗಳಿಗೆ ಒಳಗಾಗುತ್ತಾಳೆ. ಆದರೂ ಕೂಡಾ ಇವಳು ಈ ಲೋಕದ ದಿನನಿತ್ಯದ ದೈನಿಕವಾಗಿ ಮುಂದುವರಿಕೆಯಾಗಿ ಕಾಣುತ್ತಾಳೆ.

ಈ ಕೃತಿಯ ಇನ್ನೊಂದು ಮುಖ್ಯವಾದ 'ಸ್ತ್ರೀ' ಪಾತ್ರಚಕೋರಿ ಅಥವಾ ಯಕ್ಷಿ ಇವಳು ಹೆಣ್ಣು ಹೌದು, ದೈವವು, ಕತೆಯ, ಎಲ್ಲವು ಆಗಿರುವುದರಿಂದ ಈ ಚರ್ಚೆಯು ಮುಖ್ಯವಾಗಿ ಅವಳು ಚಂದಮುತ್ತನ ಜೊತೆಗಿನ ಸಂಬಂಧ, ಲಕ್ಕಬ್ಬೆಯ ಜೊತೆಗಿನ ಸಂಬಂಧದ ಬಗ್ಗೆ ಮಾತ್ರ ಒಳಗೊಂಡಿದೆ. ಉಳಿದ ಮುದಿ ಜೋಗ್ತಿ, ದೈವ ಇದನ್ನು ಕೂಡಾ ಚರ್ಚೆಯು ಮಾಡವುದಾಗಿದೆ. ಶಿಲೆಯಾಗಿದ್ದವಳು ರೂಪವನ್ನು ಪಡೆಯಲು ಸಾಧ್ಯವಾಗುವುದೇ ಕಲೆ ಅಥವಾ ಕೊಳಲನ್ನು ನುಡಿಸಿದಾಗ ಬಹಿರ್ ರೂಪ ಕರಗಿ ಚಕೋರಿಯಾಗುತ್ತಾಳೆ. ಚಂದಮುತ್ತ ಕೊಳಲನ್ನು ನುಡಿಸುವಲ್ಲಿಯೇ ಪ್ರತ್ಯಕ್ಷವಾಗಿ ಇವಳ ಆಡವ ಮಾತುಗಳು ಸ್ತ್ರೀ ಸಹಜವಾದ ಮಾತುಗಳಾಗಿವೆ.

''ತಡೆಯಲಾಗಲೇ ಇಲ್ಲ ನಮ್ಮ ಈ ನವಿರಾ
ಮೈತುಂಬ ಸಳಸಳ ತುಳುಕ್ಯಾವ ಬೆವರಾ
ಹಟ್ಟಿಸ್ವಾಮಿಯೆ ನಿನ್ನ ಕಟ್ಟಳೆಯ ಗೊರತಾ
ಅರೆಗಳಿಗೆ ಇರಲಾರೆ ನಾ ನಿನ್ನ ಮರೆತಾ
ನಿಲ್ಲೋ ಗೊಲ್ಲರ ಹುಡುಗ ಕೊಳಲೂದಬ್ಯಾಡ
ನಮ್ಮ ರಾಗದ ಹುಚ್ಚ ಕೆರಳಿಸಬ್ಯಾಡ
ಮಂದಿ ಏನಂದಾರು ನಾ ಹಿಂದೆ ಬರಲು
ವಾರೀಗಿ ದೇವರು ಕೋಪಗೊಂಡಾರು''[6]

ತಾನು ದೈವ ಎಂಬುದನ್ನೇ ಮರೆತು ಪುರುಷನೊಬ್ಬನಿಗೆ ಸೋಲುವ ಯಕ್ಷಿಯು ಚಂದಮುತ್ತನಲ್ಲಿ ಅನುರಕ್ತಳಾಗುವುದಕ್ಕೆ ಮುಖ್ಯ ಕಾರಣ ಅವನು ಕೂಡಾ ಹೆಂಗರುಳಿನವನೇ ಆಗಿರುವುದಾಗಿದೆ. ಹೀಗೆ ಯಕ್ಷಿಯ ರೂಪ ಚಂದಮುತ್ತನಲ್ಲಿ ಪ್ರಕಟಗೊಳ್ಳುತ್ತಲೇ ಕೃತಿಯಲ್ಲಿ ಅನೇಕ ರೀತಿಯ ಅಪಾಯಗಳು ತಂದುಕೊಳ್ಳುತ್ತಾರೆ.

ಚಂದಮುತ್ತ ತಿಂಗಳರಾಗವನ್ನು ಕಲಿಯುವ ಸಲುವಾಗಿಯೇ ಕಲೆಯ ಬೆನ್ನಟ್ಟಿ ಹೊರಟು ಅದನ್ನು ಪಡೆದುಕೊಂಡವನು. ಚಂದಮುತ್ತ ಮತ್ತು ಯಕ್ಷಿಯರ ನಡುವಿನ ಈ ಪ್ರೇಮದಿಂದಾಗಿಯೇ ಯಕ್ಷಿಯು ಅವನಿಗೆ ಒಲಿದು ತಿಂಗಳರಾಗವನ್ನು ಹೇಳಿಕೊಡುತ್ತಾಳೆ. ಅಂತಹ ರಾಗದ ಸಂದರ್ಭದಲ್ಲಿ ದಿವ್ಯ ಸುಂದರಿಯಾಗಿ, ದಿಗಂಬರಿಯಾಗಿ ಚಂದಮುತ್ತನದಲ್ಲಿ ಪ್ರತ್ಯಕ್ಷಗೊಳ್ಳುತ್ತಾಳೆ. ಸ್ವಂತ ದೈವವಾದರೂ ಕಾಮದ ಆತುರದಿಂದಲೇ ಚಂದಮುತ್ತನನ್ನು ನೋಡಿ ಅಪ್ಪಿ, ಮೆಚ್ಚಿಕೊಳ್ಳುತ್ತಾ ಪರಸ್ಪರ ಒಬ್ಬರನೊಬ್ಬರು ಅಪ್ಪುತ್ತಾರೆ ಈ ಕೆಳಗಿನ ಸಾಲುಗಳಲ್ಲಿ ಅಂತಹ ತೀವ್ರತೆ ಇರುವುದನ್ನು ಕಾಣಬಹುದು.

''ಆತುರ ತೀವ್ರ ಕಾಮಾತುರ ತಾಳದೆ
ಚಂದಮುತ್ತನನ್ನು ಆಕ್ರಮಿಸಿ
ಬಾಹುಮಂಡಳದಲ್ಲಿ ಕಟ್ಟಿ ಮುದ್ದಾಡಿದಳು
ಕುಂಭ ಕುಂಚದಿಂದವನ ಗುಮ್ಮಿ
ಹೆಪ್ಪುಹಾಕಿದ ಹಾಗೆ ಜನಿಗಿಯ ಹಾಲಿಗೆ
ಒಪ್ಪುಗೊಂಡರು ಅಪ್ಪುಗೆಮೈಯಲಿ
ಜೀವರಸ ಚಿಮ್ಮಿಸುವ ಸೊಗಸುಗಳ ಸುಖಿಸಿದರು
ಗಳರಸ ಸಂಗೀತದಲ್ಲಿ
ಎಳೆತಗಳ ಸೆಳೆತಗಳ ಬಲಗೊಳಿಸಿ ಸುಖಿಸಿದಳು
ಜಘನ ಗದ್ಗದಿಸ್ಯಾವು ಬೆವರಿ
ಮಾನವ ಶಕ್ತಿಗಳ ಚಪ್ಪರಿಸಿ ಸವಿದಳು
ತೃಪ್ತಿಯ ನಗಿಗಳ ಸೂಸಿ''[7]

ಮೇಲಿನ ಭಾಗಗಳು ಕಂಬಾರರ ಸಾಹಿತ್ಯದಲ್ಲಿ ಬರುವ ಸಮೃದ್ಧ ಕಾಮದ ಭಾಗವಾಗಿ, ಜೀವಸೃಷ್ಠಿಯ ನೆಲೆಯಾಗಿ ಯಕ್ಷಿಯನ್ನು ಕಾಣಬಹುದು. ಮಾನವ ಶಕ್ತಿಗಳನ್ನು ಅರಿಯುವುದರ ಮೂಲಕವೇ ಇಲ್ಲಿ ಯಕ್ಷಿಯು ದೈವತ್ವದಿಂದ ಮಾನವಳಾದರೆ, ಚಂದಮುತ್ತ

ದೈವತ್ವಕ್ಕೇರುತ್ತಾನೆ ಮತ್ತು ಇವಳನ್ನು ಪ್ರೀತಿಸುವುದರಲ್ಲಿಯೇ ದುರಂತವು ಕೂಡಾ ಇದೆ ಮತ್ತು ಅತ್ಯಂತ ಉದಾತ್ತತೆಯು ಕೂಡಾ ಆಗಿದೆ.

ಚಕೋರಿಯನ್ನು ದುಷ್ಟಮಾರ್ಗದಿಂದ ಒಲಿಸಿಕೊಳ್ಳಬೇಕೆಂಬ ಮಹಾನುಭಾವ ಚಿನ್ನಮುತ್ತನ ಕ್ರಮಗಳಿಂದ ಯಕ್ಷಿಯು ಮತ್ತೆ ಶಿಲೆಯಾಗುತ್ತಾಳೆ. ಮತ್ತೆ ಇವಳನ್ನು ಜೀವ ತರಬೇಕಾದರೆ ಚಂದಮುತ್ತ ಶಿಲೆಯಾಗಬೇಕು. ಚಂದಮುತ್ತನ ಆಯ್ಕೆಯು ಕೂಡಾ ಕಲೆಯ ಪ್ರತಿರೂಪವಾಗಿರುವ ಯಕ್ಷಿಯನ್ನು ಶಿಲೆಯಿಂದ ಬಿಡುಗಡೆಗೊಳಿಸುವುದು ಮತ್ತು ಕಲೆಯ ನಿರಂತರತೆಯನ್ನು ಮುಂದುವರಿಸುವುದಾಗಿದೆ. ಚಂದಮುತ್ತ 'ತಿಂಗಳ ರಾಗವನ್ನು' ನುಡಿಸುವ ಸಂದರ್ಭದಲ್ಲಿ ಮತ್ತೇ ಸೇರಬೇಕೆಂಬ ಕಾಮಾತುರದಿಂದಲೇ ಚಕೋರಿ ಯಕ್ಷಿಯ ರೂಪ ಧರಿಸಿ ಹಾರುತ್ತಾಳೆ.

''ತಿಂಗಳು ರಾಗದ ಮಹಾಪೂರ ಬಂದು ಬಯಲು ತುಂಬಿತು ನೋಡು
ರಾಗದ ಲಹರಿ ಲಹರಿಗಳಲ್ಲಿ ಈಜುತ್ತ
ಕಣ್ಣುಗಳಲ್ಲಿ ಚಂದ್ರನ ಸೆರೆಹಿಡಿದು ಕೊಂಡಳು
ತನ್ನ ತೇಜಸ್ಸನ್ನು ತಾನೆ ಹೊರಚೆಲ್ಲುತ್ತ
ಚಿಮ್ಮುವ ಬೆಳಕಿನ ಸೆಲೆಯಂತೆ ಕಂಡಳು ಚಕೋರಿ ಎಂಬ ಯಕ್ಷಿ
ರಾಗಕ್ಕೆ ಕಾವೇರಿದಂತೆ
ಪ್ರೀತಿ ಮತ್ತು ಅಭಿಮಾನದ ಕಡೆಗಣ್ಣು ಕುಡಿನೋಟದಲ್ಲಿ
ಚಂದಮುತ್ತನ ನೋಡಿ
ಮೋಹದಲ್ಲಿ ಅವನ ಹಾಡಿಗೆ ತಾಳ ಬಾರಿಸಿದಂತೆ
ರೆಕ್ಕೆ ಬಡಿಯುತ್ತ
ಎಳೆಯ ಬೆಳ್ದಿಂಗಳಲ್ಲಿ ಮೇಲುಮೇಲಕ್ಕೆ ಈಜುತ್ತ
ಹಾರಿದಳು''[8]

ಚಕೋರಿಯು ಮತ್ತೆ ಚಂದಮುತ್ತನನ್ನು ಪಡೆಯುವ ಹಂಬಲವು ಕೂಡಾ ಇದೆ. ಇದರ ಮೂಲಕವೇ ಯಕ್ಷಿಯು ಮತ್ತೆ ಮತ್ತೆ ಕಲೆಯ ಬೇರೆ ಬೇರೆ ರೂಪುಗಳನ್ನು ತಾಳುವ ಈ ಮೂಲಕ ಚಂದಮುತ್ತನನ್ನು ಕೂಡುವ, ಕೃತಜ್ಞತೆಯು ಕೂಡಾ ಯಕ್ಷಿಗೆ ಇದೆ.

ಚಕೋರಿಯಲ್ಲಿ ಚಂದಮುತ್ತನು ಕೂಡಾ ಪುರುಷಾಧಿಕಾರದವನಾಗಿರದೇ ತೀವ್ರ ಹೆಂಗರುಳಿನ ಸ್ತ್ರೀ ನೆಲೆಯಲ್ಲಿಯೇ ಕಾಣುತ್ತಾನೆ . ಆದರೆ ಯಕ್ಷಿಯು ಒಂದರ್ಥದಲ್ಲಿ

ಗಂಡಸಿನ ಮೌಲ್ಯಗಳನ್ನು ರೂಢಿಸಿಕೊಂಡಿರುವವಳು ಚಿನ್ನಮುತ್ತರು ಪಡೆಯುವ ಸಲುವಾಗಿ ಮಾಡಿದ ಕುತಂತ್ರಗಳಿಗೆ ಬಲಿಯಾಗುತ್ತಲೇ ಯಕ್ಷಿ ಅನಂತತೆಯನ್ನು ತಲುಪುತ್ತಾಳೆ. ಯಕ್ಷಿಯ ಎರಡು ನೆಲೆಗಳಲ್ಲಿ ಪ್ರಕಟಗೊಳ್ಳುತ್ತಾಳೆ. ಒಂದು ಶಿಲೆಯಾಗಿ ಇನ್ನೊಂದು ದೈವವಾಗಿ ಅಥವಾ ಪಕ್ಷಿಯಾಗಿ ಹೀಗೆ ಅನೇಕ ಬಗೆಯಾಗಿ ಪ್ರಕಟಗೊಳ್ಳುತ್ತಲೇ ಬೇರೆ ಬೇರೆ ಸ್ತರಗಳನ್ನು ಕಾಣಬಹುದು.

ಶಿಖರ ಸೂರ್ಯವು ಈಗಾಗಲೇ ಈ ಅಧ್ಯಯನದ ಹಿಂದಿನ ಅಧ್ಯಾಯಗಳಲ್ಲಿ ಚರ್ಚಿತವಾದಂತೆ ಶಿವಾಪುರ ಮಾತೃಸಂಸ್ಕೃತಿಯ ನೆಲೆಯಾಗಿಯು ಕನಕಪುರಿಯು ಪಿತೃಸಂಸ್ಕೃತಿಯ ಕೇಂದ್ರಗಳಾಗಿರುವುದನ್ನು ಕಾಣಬಹುದು. ಅಧಿಕಾರ, ಶಕ್ತಿ, ಅಹಂಕಾರ, ಸ್ವಾರ್ಥತೆ ಮುಂತಾದ ಅನೇಕ ನೆಲೆಗಳು ವಿದ್ಯೆ, ಬುದ್ಧಿ - ಭಾವದ ವಿಜ್ಞಾನ-ತಂತ್ರಜ್ಞಾನದ ಆಧುನಿಕತೆ- ಪರಂಪರೆಯ ನೆಲೆಗಳ ನಡುವೆಯು ಶಿಖರ ಸೂರ್ಯಕೃತಿಗಳಲ್ಲಿ ಗಮನಸೆಳೆಯುವ ಸಂಗತಿಯೆಂದರೆ ಇಲ್ಲಿನ ಹೆಣ್ಣು ಪಾತ್ರಗಳ ವೈವಿದ್ಯತೆಯಿಂದ. ಮೇಲುನೋಟಕ್ಕೆ ಈ ಕಾದಂಬರಿಯ ಪುರುಷದಿಕಾರದ, ಪುರುಷ ಮೌಲ್ಯಗಳಿಂದ ತುಂಬಿರುವಂತೆ ಕಂಡರೂ ಇಲ್ಲಿನ ಅನೇಕ ಸ್ತ್ರೀ ಪಾತ್ರಗಳು ತಮ್ಮ ಅಸ್ತಿತ್ವವನ್ನು ಪ್ರಕಟಗೊಳಿಸುವೆ. ಶಿಖರಸೂರ್ಯನಿಗೆ 'ಶಿವಾಪುರದ ಅಮ್ಮನ ಸಾನಿಧ್ಯ ಬೇಸರವೆನಿಸಿದರೂ ಅಲ್ಲಿನ ಬೆಳ್ಳಿಯನ್ನು ನೋಡಿದಾಗಲೆಲ್ಲಾ ಉತ್ಸಾಹದಿಂದ ಇರುವ ಹಾಗೆ ಕಾಣುತ್ತಾನೆ ಇಲ್ಲಿನ ಅನೇಕ ಸ್ತ್ರೀಪಾತ್ರಗಳು ಭಿನ್ನ ಭಿನ್ನ ನೆಲೆಗಳಲ್ಲಿ ಪ್ರಕಟಗೊಳ್ಳುವುದನ್ನು ಕಾಣಬಹುದು. ಅದಮ್ಯ ಜೀವನ ಉತ್ಸಾಹದ ವಿವೇಕದ ಪ್ರತಿನಿಧಿಗಳಾಗಿ ಬೆಳ್ಳಿ, ಗೌರಿ, ಒಂದು ತುದಿಯಾದರೆ ತೀವ್ರತೆಯನ್ನುಳ್ಳ, ಮಹತ್ವಾಕಾಂಕ್ಷೆಯ ಕುಟಿಲತೆಯ, ರಾಜಕೀಯವನ್ನು ಮಾಡುವ ಛಾಯದೇವಿ, ಮಹಾರಾಣಿಯರದು ಮತ್ತೊಂದು ನೆಲೆಯಾಗಿವೆ. ಇದೆಲ್ಲವನ್ನು ಮೀರಿದ ಮನುಷ್ಯ ಸಹಜ ಪ್ರೀತಿ ವಿಶ್ವಾಸಗಳ, ಕೃತಕತೆ ಇಲ್ಲದ ವಾಸಂತಿ, ವಿದ್ಯುಲ್ಲತೆಯರು ಕೂಡಾ ಈ ಕಾದಂಬರಿಯಲ್ಲಿ ಗಮನ ಸೆಳೆಯುತ್ತಾರೆ.

ಈಗಾಗಲೇ ಹೇಳಿರುವಂತೆ ಕಂಬಾರರ ಸಾಹಿತ್ಯದಲ್ಲಿ ಪ್ರಕಟಗೊಳ್ಳುವ ಹೆಣ್ಣು ಕೇವಲ ಕಾಮದ, ಅಧೀನತೆಯನ್ನು ಒಪ್ಪಿಕೊಳ್ಳದ ಪಾತ್ರಗಳಲ್ಲ. ಬೆಳ್ಳಿಯು ಇಡೀ ಕಾದಂಬರಿಯಲ್ಲಿ ಹೆಚ್ಚು ಚೈತನ್ಯಭರಿತಳಾಗಿ, ಉದಾರತೆಯನ್ನು ಮೆರೆಯುವ ಪಾತ್ರವಾಗಿದೆ. ಈ ಕೃತಿಯಲ್ಲಿ ಬರುವ ಇನ್ನೊಂದು ಅಂಶವೆಂದರೆ ಹೆಣ್ಣಿನ ವರ್ಣನೆಗಳು ಕೃತಕವಾದ, ಯಾಂತ್ರಿಕ ನೆಲೆಯ ವರ್ಣನೆಗಳಲ್ಲ. ಬದುಕಿನ ಪ್ರೀತಿಯುಳ್ಳ ಸಮೃದ್ಧಿಯನ್ನು ಸೃಷ್ಟಿಸುವ ಪಾತ್ರಗಳು, ಬೆಳ್ಳಿಯ

ಶಿವಾಪುರದ ಜಟ್ಟಿಗನ ಮಡದಿಯಾಗಿ, ತನ್ನದೇ ಆದ ಅಸ್ತಿತ್ವವನ್ನು ಗುರ್ತಿಸಿಕೊಂಡವಳು. ಹುಲಿಯನ್ನು ಬೇಟೆಯಾಡಬಲ್ಲಳು, ವೈದ್ಯೆಯನ್ನು ಮಾಡಬಲ್ಲ, ಅದ್ಭುತ ನೃತ್ಯಗಾರ್ತಿಯಾಗಿ ಜಟ್ಟಿಗನಿಗೆ ನೆಚ್ಚಿನ ಮಡದಿಯಾಗಿ ನಿನ್ನಡಿಯ ವಿವೇಕಪೂರ್ಣ ತಾಯಿಯಾಗಿ, ಶಿಖರಸೂರ್ಯನ ಕ್ರೌರ್ಯವನ್ನು ಕ್ಷಮಿಸುವ ಉದಾರತೆ ಎಲ್ಲವು ಕೂಡಾ ಬೆಳ್ಳಿಯಲ್ಲಿಯೇ ಇರುವ ವ್ಯಕ್ತಿತ್ವ ಬೇರೆ ಬೇರೆ ನೆಲೆಗಳಾಗಿವೆ. ಅದ್ಭುತ ಸೌಂದರ್ಯವತಿಯಾದ ಬೆಳ್ಳಿಯನ್ನು ಪಡೆಯಲೇಬೇಕೆಂಬ ಹಂಬಲದಿಂದ ಜಟ್ಟಿಗನನ್ನು ಕೊಂದು ಬೆಳ್ಳಿಯು ಸಿಗದೇ ಶಿವಾಪುರದಿಂದ ಓಡಿಹೋಗುವ ಶಿಖರಸೂರ್ಯನ ಬದುಕಲ್ಲಿ ಹೆಣ್ಣು ಮಾರಕವಾಗುತ್ತಾಳೆ. ಚಕೋರಿಯ ಕೃತಿಯಲ್ಲಿ ಚಕೋರಿ (ಯಕ್ಷಿ)ಯನ್ನು ಪಡೆಯ ಹೋಗಿ ದುರಂತಕ್ಕೆ ಈಡಾದ ಹಾಗೇ ಶಿಖರ ಸೂರ್ಯ ಕೃತಿಯಲ್ಲೂ ದುರಂತವನ್ನು ಅಪ್ಪುತ್ತಾನೆ. ಆದರೆ ಶಿಖರ ಸೂರ್ಯನನ್ನು ಕ್ಷಮಿಸಬಲ್ಲಹೆಣ್ಣು ಮತ್ತು ಅವನಷ್ಟೇ ಶಕ್ತಿಶಾಲಿಯಾದಂತವಳು ಶಿಖರ ಸೂರ್ಯ ಮತ್ತೆ ಶಿವಾಪುರವನ್ನು ಆಕ್ರಮಿಸಲು ಬಂದಾಗ ಬೆಳ್ಳಿಯ ಜೊತೆಗಿನ ಮಾತುಗಳಲಿ ಇದು ವ್ಯಕ್ತವಾಗುತ್ತದೆ. ಶಿಖರ ಸೂರ್ಯನೂ ಕೂಡಾ ಬೆಳ್ಳಿಯ ಸೌಂದರ್ಯದಿಂದಲೇ ದುಷ್ಟನಾದದ್ದನ್ನು ಹೇಳುತ್ತಾನೆ ''ನಾನು ಸಂತನಲ್ಲ ನಿಜ ಆದರೆ ನಿನ್ನ ಸೌಂದರ್ಯವೇ ನನ್ನನ್ನು ರಾಕ್ಷಸನನ್ನಾಗಿ ಪರಿವರ್ತನೆ ಮಾಡಿತು. ನನ್ನಲ್ಲಿಯೂ ಎಲ್ಲಾ ಒಳ್ಳೆಯತನ ಮತ್ತು ಕೆಡಕನ್ನು ಹೊರತರುವ ಶಕ್ತಿ ಇದ್ದವಳು ನೀನೊಬ್ಬಳೇ ಆದರೆ ಜಟ್ಟಿಗನಿಗೆ ಎಲ್ಲಾ ಕೊಟ್ಟು ಬಿಟ್ಟಿದ್ದೀ ಅಂತ ಗೊತ್ತು. ಆದರೆ ನಿನಗೇನೂ ಕೊಡಲಿಲ್ಲ. ಸುಖ ಇರಲಿ, ಮನಶ್ಯಾಂತಿ ಕೂಡ ಕೊಡಲಿಲ್ಲ. ಹುಚ್ಚು ನಿರಾಸೆಗಳನ್ನು ಮಾತ್ರಕೊಟ್ಟೆ''[9] ಕಂಬಾರರ ಕೃತಿಗಳಲ್ಲಿ ಬಹುಪಾಲು ಹೆಣ್ಣುಗಳು ಈ ರೀತಿಯ ಕೇಡನ್ನು, ಸುಖವನ್ನು, ನೆಮ್ಮದಿಯನ್ನು, ಜೀವಸೃಷ್ಟಿಸುವ, ಸೌಂದರ್ಯವತಿಯಾಗಿರುವುದನ್ನು ಕಾಣಬಹುದು.

ಬೆಳ್ಳಿಯ ಪಾತ್ರದಲ್ಲಿ ಗಮನಿಸಬೇಕಾದ ಇನ್ನೊಂದು ಅಂಶವೆಂದರೆ ಶಿಖರಸೂರ್ಯನನ್ನು ನಿರಾಕರಿಸುತ್ತಲೇ ಅವನನ್ನು ಮಗ ಎಂದು ಒಪ್ಪಿಕೊಳ್ಳುವುದರಲ್ಲಿಯೂ ಕೂಡಾ ಹೆಣ್ಣು ಗಂಡಿನ ಅನೇಕ ತಪ್ಪುಗಳನ್ನು ಸಹಿಸಿಕೊಳ್ಳುವುದರಲ್ಲಿಯೇ ದುರಂತತೆಯ ನೆಲೆಯೂ ಕೂಡಾ ಇದೆ. ಆದರೂ ಕೂಡಾ ಗಂಡಿನ ದುರಂಹಕಾರದ ಕಾಮುದ ಇಚ್ಚೆಯುಳ್ಳವನಾಗಿಯೇ ಬೆಳ್ಳಿಯನ್ನು ಪಡೆಯಲೇ ಬೇಕೆಂಬ ಶಿಖರಸೂರ್ಯನನ್ನು ಸಮರ್ಥವಾಗಿ ಎದುರಿಸುವ ಬೆಳ್ಳಿಯ ಶಕ್ತಿಯು ಕೂಡಾ ಅಷ್ಟೇ ಮುಖ್ಯವಾಗುತ್ತದೆ. '' ತಾನೇನು ಮಾಡುತ್ತಿದ್ದೇನೆಂದು ಅರಿಯದೆ ಬಲ ಹಸ್ತ ಅಗಲಿಸಿ ಫಟಾರೆಂದು ಅವನ ಎಡಗೆನ್ನೆಗೆ ಏಟು ಹಾಕಿದಳು ನೋಡು'' ಏಟು ಅವಳದೋ, ಗವಿಯ ಅಮ್ಮನದೋ,

ಗುಡಿಯ ಜಟ್ಟಿಗನದೋ, ಮಗ ನಿನ್ನಡಿಯದೋ, ಶಿವಾಪುರದ ಜನಗಳದ್ದೋ, ಇಡೀ ಕೊಳ್ಳದ ತುಂಬ ಪ್ರತಿಧ್ವನಿಸಿತು ಬಲಾಢ್ಯವಾದ ಅನಿರೀಕ್ಷಿತ ಏಟಿನ ರಭಸಕ್ಕೆ ಶಿಖರ ಸೂರ್ಯ ತತ್ತರಿಸಿ ಸುಮಾರು ಮೂರು ಮಾರು ದೂರ, ಎತ್ತಿ ಒಗೆದಂತೆ ಹಾಕಿ ಕಮರಿಗೆ ಬಿದ್ದ'' [10] ಹೆಣ್ಣಿಗಿರುವ ಅಗಾಧ ಶಕ್ತಿ ಚೈತನ್ಯಗಳ, ಪ್ರಕಟರೂಪವಾಗಿ ಬೆಳ್ಳಿಯನ್ನು ಕಾಣಬಹುದು.

ಬೆಳ್ಳಿಯು ತಾಯಿಯಾಗಿಯೂ ಕೂಡಾ ಗಮನ ಸೆಳೆಯುತ್ತಾಳೆ. ನಿನ್ನಡಿಯನ್ನು ಬೆಳೆಸಿ, ಪೋಷಿಸುವಷ್ಟೇ ಅಲ್ಲ. ಸದಾಕಾಲ ಅವನನ್ನು ಎಚ್ಚರಿಸುವ ಕೆಲಸದಲ್ಲಿರುತ್ತಾಳೆ. ಚಕೋರಿಯ ಲಕ್ಕಬ್ಬೆ ಇಲ್ಲಿ ಬೆಳ್ಳಿಯಂತಿದ್ದಾಳೆ. ಆದರೆ ಲಕ್ಕಬ್ಬೆಗೆ ಇಲ್ಲದಿರುವ ಚೈತನ್ಯ, ಉತ್ಸಾಹ ಶಕ್ತಿಗಳು ಬೆಳ್ಳಗಿವೆ. ನಿನ್ನಡಿಯು ಕಲಿತ ಕತೃತಕ ಚಿನ್ನವನ್ನಾಗಿಸುವ ಮತ್ತು ಸೈನಿಕರನ್ನಾಗಿ ಮಾಡುವ ವಿದ್ಯೆಯಿಂದ ಇಡೀ ಶಿವಾಪುರದ ಜನರು ಆಶ್ಚರ್ಯ, ಸಂತೋಷಗಳಿಂದ ಇದ್ದರೆ ಬೆಳ್ಳಿಯು'' ಮಗಾ, ಉಣ್ಣೋ ಅನ್ನ, ದನಿನ ಮೇವು ಹಾಳ್ಮಾಡಬಾರದು ನನ್ನಪ್ಪಾ. ಈ ವಿದ್ಯೆ ನಿನಗು''11

ಈ ಕಾದಂಬರಿಯಲ್ಲಿ ದೈವ ಪಾತ್ರವಾದ ಯಕ್ಷಿಯ ಪ್ರತಿರೂಪವಾದ ಗೌರಿಯು ಕೂಡಾ ಸ್ತ್ರೀ ಸಹಜವಾದ ಗುಣಗಳನ್ನು ಮೌಲ್ಯಗಳನ್ನು ಹೊಂದಿರುವವಳು ಚಕೋರಿಯಲ್ಲಿ ಯಕ್ಷಿಯಾದರೂ ಅಲೌಕಿಕದಲ್ಲೇ ಉಳಿದವಳು. ಆದರೆ ಗೌರಿ ಶಿಖರಸೂರ್ಯನ ಮಗಳಾದರೂ, ರಾಜಸತ್ತೆಯನ್ನು ಧಿಕ್ಕರಿಸಿ ಬಂದವಳು. ನಿನ್ನಡಿಯನ್ನು ಸೇರುವ ತವಕದಲ್ಲಿ ವಿಷವನ್ನು ತಿಂದು ಶಿವಾಪುರಕ್ಕೆ ಯಾತ್ರೆಯನ್ನು ಮಾಡಿದವಳು ತನ್ನ ತಂದೆಯ ದ್ವೇಷಕ್ಕೆ ಬಲಿಯಾಗಿ ಗರ್ಭವತಿಯಾದ ಗೌರಿಯ ಈ ಯಾತ್ರೆಯು ಮಹಾಕಾವ್ಯ ನಾಯಕರ ಸಾಹಸಯಾತ್ರೆಗಳಂತೆ ಮಾಡುತ್ತದೆ. ಪ್ರಭುತ್ವವನ್ನು ಧಿಕ್ಕರಿಸಿ ಒಬ್ಬ ಸಾಮಾನ್ಯ ಹೆಣ್ಣಾಗಿ ರೂಪುಗೊಂಡವಳು. ಅರಮನೆಯ ಒಂಟಿತನ, ಬೇಸರ ಕೃತಕವಾದ ಮಾತುಕತೆಗಳು, ಪ್ರೀತಿಯಿಲ್ಲದಿರುವ ಮನೆಗಿಂತ ಪ್ರೀತಿ ಇರುವ ಸ್ಥಳವನ್ನೇ ಬಂದಿಸುವ ಗೌರಿಯು ಸದಾಕಾಲ ಕನಸುಗಳ ಮೂಲಕವೇ ಬದುಕಿದವಳು, ಗೌರಿಯು ಸಹಜತೆಯ ನೆಲೆಯಲ್ಲಿಯೇ ಬದುಕನ್ನು ವಾಸ್ತವತೆಯನ್ನು ಎದುರಿಸಿದವಳು ನಿನ್ನಡಿಯು ಮಾಡುವ ವಧುಪರೀಕ್ಷೆಯಲ್ಲಿ ಗೆದ್ದರೂ ಕೂಡಾ ತನ್ನ ಮುಕ್ತವಾದ ನಿಲುವುಗಳನ್ನು ವ್ಯಕ್ತಪಡಿಸಿದವಳು. ನಿನ್ನಡಿಯ ಪರೀಕ್ಷೆಯಲ್ಲಿ ಗೌರಿ ಗೆದ್ದರೂ ಕೂಡಾ ತಾನು ನಿರಾಕರಿಸುವುದಕ್ಕೆ ಕೊಡುವ ಕಾರಣ ತುಂಬಾ ಮುಖ್ಯವಾದದ್ದು. ''ನೀವು ಬಂದವರು ಮೂರು ಜನ ಅವರನ್ನು ಬಿಟ್ಟು ನೀವೊಬ್ಬರೇ ಊಟಕ್ಕೆ ಕುಂತಿರಿ ಇನ್ನು ಮೂರೆಲೆ ಯಾರಿಗಾಗಿ ಇವೇ ? ಎಂದು ಚಿಂತಿಸಲಿಲ್ಲ ನೀವೊಬ್ಬರೇ ಊಟಕ್ಕೆ ಕುಂತಿರಿ. ನೀಡಿದ ತಕ್ಷಣ ಊಟ ಮಾಡಿ ತೃಪ್ತಿಯಾಯಿತು. ಅಂದಿರಿ, ನಿಮ್ಮ

ಮಡದಿಯಾಗಲಿಲ್ಲ ನನಗೆ ಏನಾದರೂ ಉಳಿದಿದೆಯೇ ನೋಡಲಿಲ್ಲ. ಹೋರಿಗೆ ಮೇವು ಹಾಕಿಯಾಯಿತೇ ಅನ್ನಲಿಲ್ಲ. ನೀವೊಬ್ಬರೇ ಉಂಡು ತೃಪ್ತಿಯಾಯಿತೆಂದರೆ ಅದು ಮನೆತನವೇ ಯ ಮನೆತನ ನಡೆಯೋದು ಇರೋದನ್ನೆಲ್ಲ ಒಬ್ಬರೇ ತಿನ್ನೋದರಿಂದಲ್ಲ. ಇರೋದನ್ನ ಇದ್ದವರೆಲ್ಲ ಹಂಚಿ ತಿನ್ನೋದರಿಂದ "[12] ಗೌರಿಯ ಈ ಮಾತುಗಳು ಇದುವರೆಗೂ ನಾವು ತಿಳಿದುಕೊಂಡಿದ್ದ 'ಸಹನಾಭುನಕ್ತು' ಎಂಬುದನ್ನು ನಿರಾಕರಣೆ ಮಾಡುತ್ತದೆ. ಎಲ್ಲರೂ ಕೂಡಾ ಹಂಚಿಕೊಂಡು ತಿನ್ನುವುದೇ ಹೆಚ್ಚು ಎಂದು ಗೌರಿಯು ಈ ನಿಲುವು ಮುಖ್ಯವಾಗುತ್ತದೆ. ಆದರೆ ಗೌರಿಯು ನಿನ್ನಡಿಯನ್ನು ನಿರಾಕರಣೆ ಮಾಡಲಿಲ್ಲ.

ಗೌರಿಯು ತನ್ನ ತಂದೆಯೊಂದಿಗಿನ ಸಂಬಂಧದಲ್ಲಿ ತೀವ್ರ ಪ್ರತಿಭಟನೆಯುಳ್ಳ ಹೆಣ್ಣಾಗಿ ಕಾಣುತ್ತಾಳೆ. ತನ್ನ ಮತ್ತು ನಿನ್ನಡಿಯ ಪ್ರೀತಿಯ ಬಗ್ಗೆ ಹೇಳುತ್ತಲೇ ಸಹಜವಾದ ನೆಲೆಯಲ್ಲಿಯೇ ಕಾಣುತ್ತಾಳೆ. ಆದರೆ ಇದನ್ನು ತೀವ್ರವಾಗಿ ವಿರೋಧಿಸುವ ತಂದೆಯ ಮಾತುಗಳಿಗೆ ವಿರುದ್ಧವಾಗಿ ಶಿವಾಪುರದ ಪರವಹಿಸುತ್ತಾಳೆ. ಕನಕಪುರಿಯ ವೈಭವಗಳು, ಕೇವಲ ಕ್ಷಣಿಕ ಸಂತೋಷವೆಂಬುದನ್ನು ಬಲ್ಲ ಗೌರಿಯು ಶಿವಾಪುರದಲ್ಲಿ ಸಂತೋಷ ಮತ್ತು ಪ್ರೀತಿಯನ್ನು ಹರಸುತ್ತಲೇ ಅಲ್ಲಿಗೆ ಹೊರಟವಳು ತಂದೆಯನ್ನು ಕೂಡಾ ಬೆಚ್ಚಿ ಬೀಳಿಸುವಷ್ಟು ಶಕ್ತಿಯಿರುವವಳು. ನಿನ್ನಡಿಯನ್ನು ಶಿಖರಸೂರ್ಯ ಬಂದಿಸಿಟ್ಟ ಸಂದರ್ಭದಲ್ಲಿ ಗೌರಿಯ ಆವೇಶ, ಕೋಪವನ್ನು ಗಮನಿಸಬಹುದು. 'ಕೆಂಪು ಕಣ್ಣು ಕಿಸಿದು ಸೀರೆಯ ಸೆರಗು ಸೊಂಟದಲ್ಲಿ ಸಿಕ್ಕಿಸಿಕೊಂಡು ಏಟು ಹಾಕಿದ ಸೈನಿಕ ಕೋಲು ಕಸಿದು ಆಮೇಲೆ ಆ ಸೈನಿಕನ ಎದೆಗೆ ಜೋರಾಗಿ ಒದ್ದಳಪ್ಪ! ಅಷ್ಟು ದೂರ ಬಿದ್ದ ಅವನ ಜುಟ್ಟು ಹಿಡಿದು ಎಳೆಯುತ್ತ ಶಿಖರಸೂರ್ಯನಿದ್ದಲ್ಲಿಗೆ ಒಯ್ದಳು. ಗೌರಿಯ ಈ ಅವತಾರ ನೋಡಿ ಶಿಖರಸೂರ್ಯ ಕುರುಮನಿ ಗೊಂಬೆಯಂತೆ ನಿಂತರು. ಎಳೆದುತಂದಿದ್ದ ಭಂಟನನ್ನು ಕಸದ ಮೂಟೆ ಎಸೆಯುವಂತೆ ತಂದೆಯ ಪಾದದ ಮೇಲೆ ಚೆಲ್ಲಿದಳು''[13] ಗೌರಿಯ ಈ ಶಕ್ತಿಯು ಬೆಳ್ಳಿಯನ್ನು ನೆನಪಿಸುತ್ತದೆ. ಇಂತಹ ಶಕ್ತಿಸಾಮರ್ಥ್ಯಗಳು, ಪ್ರತಿಭಟನೆ, ಧೈರ್ಯಗಳು ಉಳಿದ ಪಾತ್ರಗಳಾದ ಮಹಾರಾಣಿ ಛಾಯಾದೇವಿ ಯಾರಿಗೂ ಇಲ್ಲದಿರುವುದನ್ನು ಕಾಣಬಹುದು. ಕಾದಂಬರಿಯಲ್ಲಿ ಈ ರೀತಿಯ ಸ್ತ್ರೀ ಅಂತಚ್ಚೈತನ್ಯವುಳ್ಳ ಪಾತ್ರಗಳಲ್ಲಿ ಬೆಳ್ಳಿ ಮತ್ತು ಗೌರಿಯರಿಬ್ಬರೇ ಉಳಿದ ಪಾತ್ರಗಳು ತಮ್ಮ ಹೊರಗಿನ ಶಕ್ತಿಯನ್ನೇ ನಂಬಿಕೊಂಡವರು. ಇಲ್ಲವೇ ನೆರಳಲ್ಲಿ ಬದುಕಿದಂತವರು. ಅಂತಹ ಪಾತ್ರಗಳಲ್ಲಿ ಮಹಾರಾಣಿಯು ಕೂಡಾ ಒಬ್ಬಳು.

ಮಹಾರಾಣಿ ಕನಕಪುರಿಯ ರಾಜಕೀಯದಲ್ಲಿ ಮುಖ್ಯಪಾತ್ರ ವಹಿಸಿದಂತವಳು. ಮಹಾರಾಜನ ಹೆಂಡತಿಯಾಗಿದ್ದರೂ ಅವನಿಂದ ಸಿಗದೇ ಇರುವ ಲೈಂಗಿಕ ಸುಖವನ್ನು ಅರ್ಥಕೌಶಲನಲ್ಲಿ ಪಡೆದುಕೊಂಡವಳು. ಈ ಕಾರಣಕ್ಕಾಗಿ ರಾಜನನ್ನು ಕೊಲ್ಲುವ ಯೋಚನೆಯನ್ನು ಮಾಡಿದವಳು. ಮಹಾರಾಣಿಯ ಪಾತ್ರವು ಕಂಬಾರರ ಇತರ ಪಾತ್ರಗಳಾದ ಸಿಂಗಾರವ್ವ, ಜೋಕುಮಾರಸ್ವಾಮಿಯ ಗೌಡ್ತಿಯನ್ನು ನೆನಪಿಗೆ ತರುತ್ತದೆ. ರಾಜಪ್ರಭುತ್ವವನ್ನು ಆಳುವವನು ನಿರ್ದಯನಾಗಿರುತ್ತಾನೆ. ಷಂಡನಾಗಿರುತ್ತಾನೆ ಎಂಬ ಸತ್ಯವನ್ನು ಈ ಕಾದಂಬರಿಯು ಪ್ರತಿಪಾದಿಸುತ್ತದೆ. ಜೋಕುಮಾರಸ್ವಾಮಿಯ ಗೌಡ, ಸಿಂಗಾರವ್ವ ಮತ್ತು ಅರಮನೆಯ ದೇಸಾಯಿ ಸಾಲಿಗೆ ಈ ಕಾದಂಬರಿಯ ರಾಜನೂ ಸೇರುತ್ತಾನೆ. ಈ ಮೂಲಕ ಹೆಣ್ಣು ತನಗೆ ಬೇಕಾಗುವ ಸುಖವನ್ನು ಪಡೆಯಲು ಸ್ವತಂತ್ರಳು ಎಂಬುದನ್ನು ಪ್ರತಿಪಾದಿಸುವಂತಿದೆ. ಮಹಾರಾಣಿಯು ತನ್ನ ಬಗ್ಗೆ ತಾನೇ ಹೆಮ್ಮೆ ಪಟ್ಟುಕೊಳ್ಳಬಲ್ಲಳು. ರೂಪವತಿಯಾಗಿರುವವಳು, ಇದರ ಮೂಲಕವೇ ಅರಮನೆಯ ಶಕ್ತಿಕೇಂದ್ರವಾಗಿದ್ದವಳು. ಇಂತಹ ಅರಮನೆಯನ್ನು , ರಾಜ್ಯವನ್ನು ನೆಡೆಸಲು ಬೇಕಾದ ದರ್ಪ, ಗತ್ತು, ಅಹಂಕಾರಗಳು ರಾಕ್ಷಸಿ ಪ್ರವೃತ್ತಿ ಶಕ್ತಿಯನ್ನು ಹೊಂದಿದವಳು. ಇವಳ ವ್ಯಕ್ತಿತ್ವದಲ್ಲಿಯೇ ಆ ಗುಣಗಳು ಕೂಡಾ ಬೆರೆತು ಹೋಗಿವೆ. ಆದರೆ ತನ್ನ ಸೌಂದರ್ಯದಿಂದಲೇ ಎಲ್ಲವನ್ನು ಗೆಲ್ಲಬಲ್ಲೇ ಎಂಬ ಆತ್ಮವಿಶ್ವಾಸ ಉಳ್ಳವಳು.

ಮಹಾರಾಣಿಯು ಅರಮನೆಯ ಕುಟಿಲತೆಗಳ ಒಂದು ಭಾಗವು ಹೌದು. ಛಾಯಾದೇವಿಯ ತಾಯಿಯಾದ ಚಿಕ್ಕಮ್ಮಣಿಯ ಮಗನನ್ನು ಕೊಲೆ ಮಾಡಲು ಪ್ರಯತ್ನ ಪಟ್ಟವಳು. ಅದು ಕೇವಲ ಅಧಿಕಾರಕ್ಕಾಗಿ ತನ್ನ ಮಗನನ್ನು ಯುವ ರಾಜನನ್ನು ರಾಜಕುಮಾರನನ್ನಾಗಿ ಮಾಡಬೇಕೆಂಬ ಮಹತ್ವಾಕಾಂಕ್ಷೆಯು ಅನೇಕ ದುರಂತಗಳನ್ನು ತಂದುಕೊಳ್ಳುತ್ತಾಳೆ. ಶಿಖರಸೂರ್ಯನನ್ನು ಕೊಲ್ಲಬೇಕೆಂಬ ಛಲವು ಕೂಡಾ ಇವಳದು. ಆದರೆ ಶಿಖರ ಸೂರ್ಯನ ಆಕ್ರಮಣವು ಇವಳನ್ನು ಜೀವಂತ ಶವವಾಗಿಸುತ್ತದೆ. ಶ್ವಾನಕೂಪದಲ್ಲಿ ಶತ್ರುಗಳನ್ನು ತಳ್ಳಿ ಖುಷಿಪಡುವ ಮಹಾರಾಣಿಯ ರಾಕ್ಷಸಿ ಗುಣವನ್ನು ನೆನಪಿಗೆ ತರುತ್ತದೆ. ಕಾಲದ ಅಂತರದಲ್ಲಿ ಮಹಾರಾಣಿಯು ಕೂಡಾ ಶಿವಪಾದನ ಬಗ್ಗೆ ತನ್ನ ಪ್ರೀತಿಯ ಬಗ್ಗೆ ಮಾತಾಡುತ್ತಾಳೆ. 'ಶಿಖರಸೂರ್ಯ' ಇಡೀ ಕನಕಪುರಿಯನ್ನು ಆಕ್ರಮಿಸಿದಾಗ ಅವನಿಂದ ಮೋಹಿತಕ್ಕೆ ಒಳಗಾಗಿ ಸಾಯುತ್ತಾಳೆ. ಆದರೂ ಕೂಡಾ ಅವಳು ಮಾತಾಡುವ ಮನುಷ್ಯನ ಮುಗ್ಧತೆಗಳ ಬಗ್ಗೆ ಪಶ್ಚಾತ್ತಾಪ ಉಂಟಾಗುತ್ತಿರುವುದನ್ನು ಕಾಣಬಹುದು. ಮತ್ತು ಇಡೀ ಕನಕಪುರಿಯ ತನ್ನನ್ನು ಗೌರವಿಸುತ್ತಿದ್ದು ಎಂಬ ಭ್ರಮೆಯಿಂದ ಹೊರಬರುತ್ತಾಳೆ.

ಆದರೆ ಕಾಲ ಮೀರಿರುತ್ತದೆ.'' ಕನಕ ಪುರಿ ಅಂದರೆ ನಾನೇ ಕನಕಪುರಿಯಾದ್ದರಿಂದ ನನಗೆ ಗಂಡನಿಲ್ಲ'' ಮಹಾರಾಜನ ಮಡದಿಯಾಗಿರುತ್ತ ಆರ್ಥಿಕೌಶಲನ ಸೂಳೆಯಾಗಿದ್ದೆ. ಈಗ ನಿನಗೆ ಒಳಗಾಗಿದ್ದೇನೆ ಇನ್ನು ಒಬ್ಬನನ್ನೇ ಬಯಸಿದ್ದೆ ನಾನು''[14] ಅವನ್ಯಾರು ಎಂದಾಗ ''ಶಿವಪಾದ'' ಎನ್ನುತ್ತಾಳೆ. ಮಹಾರಾಣಿಯು ತನಗೆ ದಕ್ಕದೇ ಇರುವ ಶಿವಪಾದನಲ್ಲಿ ಆಸಕ್ತಳಾಗುವುದು ಗಮನಾರ್ಹ ಮತ್ತು ತನ್ನ ಪ್ರಾಯಶ್ಚಿತ್ತಕ್ಕಾಗಿ ಶಿವಪಾದ, ಶಿವಾಪುರವನ್ನು ಹಂಬಲಿಸುತ್ತಾಳೆ. ಚಿನ್ನದ ರಾಜ್ಯದಲ್ಲಿ ಇಬ್ಬರಿರುತ್ತಾರೆ ಬಲ ಇದ್ದವರು ಮತ್ತು ದುರ್ಬಲರು. ಬಲ ಇದ್ದವರು ದುರ್ಬಲರನ್ನು ಆಳುತ್ತಾರೆ. ಅದಕ್ಕೇ ಚಿನ್ನ ಬೇಕು ಅರ್ಥಿಕೌಶಲ ಹೇಳುತ್ತಿದ್ದದನ್ನು ನೀನು ಕೇಳಿರಬೇಕು. ಚಿನ್ನ ಬಿಟ್ಟು ಉಳಿದೆಲ್ಲವೂ ಸಗಣಿ. ಆ ಸಗಣಿಗೇ ನಾವು ಸದ್ಗುಣ, ಮೌಲ್ಯ, ಗೌರವ, ಮಣ್ಣು ಮಸಿ ಅಂತೀವಿ. ಅಂತ. ಅಂದರೆ ನೀವು ಪ್ರತಿಪಾದಿಸುವ ಪ್ರಗತಿ ಸ್ವಾರ್ಥಪರವಾದದ್ದು. ಅದೇ ಶಿವಾಪುರದಲ್ಲಿ ನೋಡು ಅಲ್ಲಿರೋದು ಎರಡೇ ಸರಿ ಮತ್ತು ತಪ್ಪು. ತಪ್ಪನ್ನು ಸರಿಪಡಿಸುತ್ತ ಎರಡನ್ನೂ ರಾಜಿ ಮಾಡಿಸುತ್ತ ಮುಂದುವರಿಯುತ್ತಾರೆ. ಇಲ್ಲಿ ಕನಕಪುರಿಯಲ್ಲಿರುವಂಥ ಸ್ಪರ್ಧೆಯಾಗಲೀ, ರಾಜಕಾರಣವಾಗಲಿ ಇಲ್ಲ. ಇದು ಸರಿಯಾದ ವ್ಯವಸ್ಥೆ ಅಲ್ಲವೇ ? ನೀವೋ ಎಷ್ಟು ಸಂಗ್ರಹಿಸಿದರೂ ಸಾಲದೆಂದು ಸದಾ ಅತೃಪ್ತಿಯಿಂದ ಪ್ರಗತಿ ಬದಲಾವಣೆಗಳತ್ತ ಧಾವಿಸುತ್ತಲೇ ಇರುತ್ತೀರಿ ಅದಕ್ಕಾಗಿ ಯುದ್ಧ ಮಾಡುತ್ತಲೇ ಸದಾ ಕೊಲ್ಲುತ್ತಲೇ ಇರುತ್ತೀರಿ. ಕೊನೆಗೂ ಸ್ಪರ್ಧೆಗಾಗಿ ದೇವರಿಗೇ ಸೆಡ್ಡು ಹೊಡೆಯುತ್ತೀರಿ''[15] ಮಹಾರಾಣಿಯ ಈ ಮೇಲಿನ ಮಾತುಗಳು ತಾವು ಬದಲಾಗಬೇಕೆಂಬ ಇಚ್ಛೆಯುಳ್ಳವಳಾಗಿ ಕಾಣುತ್ತಾಳೆ.

ಮಹಾರಾಣಿಯ ಕೊನೆಯ ಮಾತುಗಳ ಈ ಹಂಬಲವು ಕೂಡಾ ಇವಳ ವ್ಯಕ್ತಿತ್ವದ ನಾಟಕೀಯತೆಯನ್ನು ಕಾಣಬಹುದು. ಅನೇಕ ರೀತಿಯ ಅಡೆ-ತಡೆಗಳ ನಡುವೆಯೂ ಕೂಡಾ ತನ್ನ ವ್ಯಕ್ತಿತ್ವವನ್ನು ಉಳಿಸಿಕೊಂಡವಳು ಕಾದಂಬರಿಯಲ್ಲಿ ತೀವ್ರರೀತಿಯ ಶಕ್ತಿಯನ್ನು ಪಡೆಯುವ ಪಾತ್ರವಾಗಿ ಮಹಾರಾಣಿಯನ್ನು ನೋಡಬಹುದು.

ಕಾದಂಬರಿಯಲ್ಲಿನ ಇನ್ನೊಂದು ಮುಖ್ಯವಲ್ಲದ ಮುಖ್ಯ ಪಾತ್ರವೆಂದರೆ ವಿದ್ಯುಲ್ಲತೆ. ಅರ್ಥಕೌಶಲನ ಕುತಂತ್ರದಿಂದ ವಿಷಕನ್ಯೆಯಾಗಿ ಮಾರ್ಪಟ್ಟರೂ ಕೂಡಾ ಸೌಂದರ್ಯದಿಂದಲೇ ಶಿಖರಸೂರ್ಯನನ್ನು ಆಕರ್ಷಿಸಿದವಳು ಮತ್ತು ಶಿಖರಸೂರ್ಯನು ಇವಳನ್ನು ನಂಬಿದವನು. ಸ್ವಂತ ತನ್ನ ಹೆಂಡತಿಯನ್ನು ನಂಬದ ಶಿಖರಸೂರ್ಯ ವಿದ್ಯುಲ್ಲತೆಯಲ್ಲಿ ಹೆಚ್ಚು ಅನುರಕ್ತನಾಗುತ್ತಾನೆ. ಇವಳು ವಿಷಕನ್ಯೆಯಾದರೂ ಕೂಡ ತುಂಬಾ

ಸರಳ ಮುಗ್ಧ, ಕೃತಕತೆ ಇಲ್ಲದ ಎಲ್ಲವನ್ನು ಕಣ್ಣಿನಿಂದಲೇ ಅಳೆಯಬಲ್ಲವಳು. ಇವಳ ಸೌಂದರ್ಯದ ಬಗ್ಗೆ ಅರ್ಥಕೌಶಲನ ಮಾತುಗಳನ್ನು ಗಮನಿಸಬಹುದು. ''ದೇವರಾಣೆ ಮಾಡಿ ಹೇಳುತ್ತೇನಯ್ಯಾ ಅವಳು ಪರಮ ಸುಂದರಿ. ಕಾಮಾತುರ ಕೆರಳಿಸುವ ಕಣ್ಣು. ಪ್ರಣಯ ಕಾಳಗಕ್ಕೆ ಆಹ್ವಾನಿಸುವ ಮಾಟದ ಮೈಕಟ್ಟು ಆಹಾಹಾ ರತಿಯ ಸಾರ ಸ್ವರೂಪಳಯ್ಯಾ ಅವಳ ಕಾಮನೊಂದಿಗೆ ಕಾಮಿಸಬೇಕಾದವಳು ಇಲ್ಲಿ ಹುಟ್ಟಿ ಬಂದಿದ್ದಾಳೆ ಅಷ್ಟೇ ''[16] ಅರ್ಥಕೌಶಲನು ದೃಷ್ಟಿಯಲ್ಲಿ ವಿದ್ಯುಲ್ಲತೆಯು ಸಮೃದ್ಧ ಕಾಮವಾಗಿ ಕಾಣುತ್ತಾಳೆ. ಆದರೆ ಶಿಖರ ಸೂರ್ಯನ ದೃಷ್ಟಿಯಲ್ಲಿ ವಿದ್ಯುಲ್ಲತೆಯ ಮುಗ್ಧ ಮತ್ತು ರತಿ ಸುಖವನ್ನು ನೀಡುವವಳು ಅಂತಹ ಸುಖವು ಶಿಖರ ಸೂರ್ಯನಿಗೆ '' ಪ್ರಸನ್ನವಾಗಿ ಸಂತೃಪ್ತಿಯಿಂದ ಇವ ತೇಲುಗಣ್ಣಾದ ಅವನಿಗೆ ಪ್ರಥಮ ಬಾರಿ ಸ್ತ್ರೀ ಸುಖ ಸಿಕ್ಕಿತ್ತು. ಆ ಸುಖ ಕಳಂಕರಹಿತವಾಗಿತ್ತು. ಅನುಮಾನ ರಹಿತವಾಗಿತ್ತು. ಭಯರಹಿತವಾಗಿತ್ತು. ಸ್ವತಂತ್ರವಾಗಿತ್ತು''[17] ವಿಷಕನ್ಯೆಯಾದರೂ ಕೂಡಾ ಶಿಖರಸೂರ್ಯ ಸಂಪೂರ್ಣವಾಗಿ ನಂಬಿದವನು. ತನ್ನ ಹೆಂಡತಿಯ ಬಗ್ಗೆ ಜಿಗುಪ್ಸೆ ಉಂಟಾಗಲು ವಿದ್ಯುಲ್ಲತೆಯು ಕೂಡಾ ಕಾರಣವೇ. ಛಾಯಾದೇವಿಯು ತನ್ನ ಗಂಡ ವಿದ್ಯುಲ್ಲತೆಯ ಸಂಗ ಮಾಡುತ್ತಿದ್ದಾನೆಂದೂ ತಿಳಿದೂ ಅವನಿಂದ ದೂರವಾಗುವ ಹಾಗೇ ಮಾಡುತ್ತಾಳೆ. ಕಾದಂಬರಿಯಲ್ಲಿ ವಿದ್ಯುಲ್ಲತೆಯು ಮಿಂಚಿನಹಾಗೆ ಕಣ್ಮರೆಯಾಗುತ್ತಾಳೆ.

ಕಾದಂಬರಿಯಲ್ಲಿ ಹಾಗೇ ಅಸ್ತಿತ್ವವೇ ಇಲ್ಲದೇ ಪ್ರಕಟಗೊಳ್ಳುವ ಸ್ತ್ರೀ ಪಾತ್ರಗಳು ಇವೆ. ವಾಸಂತಿ, ಚಿಕ್ಕಮ್ಮಣಿ ಮುಂತಾದವರ ಕಾದಂಬರಿಯಲ್ಲಿ ಪ್ರಭಾವ ಬೀರದೇ ಇರುವಂತಹದು. ಆದರೆ ವಾಸಂತಿಯೊಡನೆಯ ರವಿಕೀರ್ತಿಯ ಪ್ರೇಮ ಭಗ್ನಗೊಂಡದ್ದು ರವಿಕೀರ್ತಿಯ ಬದುಕು ನಾಶವಾಗಲು ಕಾರಣವಾಗುತ್ತದೆ. ಇದಕ್ಕೆ ಕಾರಣ ಕೂಡಾ ಶಿಖರಸೂರ್ಯನಾಗುತ್ತಾನೆ. ಕಾದಂಬರಿಯಲ್ಲಿನ ಎಲ್ಲಾ ಪಾತ್ರಗಳೂ ಹೆಚ್ಚು ಕ್ರಿಯಾಶೀಲವಾಗಿರುತ್ತದೆ. ಮತ್ತುತಮ್ಮ ಅಸ್ತಿತ್ವ ಉಳಿಸಿಕೊಳ್ಳಲು ಯತ್ನಿಸುತ್ತವೆ.

ಕಂಬಾರರ ಈ ಎರಡೂ ಕಾದಂಬರಿಗಳಲ್ಲಿನ ಸ್ತ್ರೀ ಪಾತ್ರಗಳು ಹೆಚ್ಚು ಜೀವಂತಿಕೆಯಿಂದ ಕೂಡಿವೆ. ಇಡೀ ಕಾದಂಬರಿ ಪ್ರತಿಪಾದಿಸುವ ಪುರುಷಾಧಿಕಾರದ ನೆಲೆಗಳನ್ನು ನಿರಾಕರಿಸಿ ತಮ್ಮದೇ ಆದ ನೆಲೆಗಳನ್ನು ಕಂಡುಕೊಂಡಿವೆ. ಚಕೋರಿಯ ಲಕ್ಕಬ್ಬೆ ಮತ್ತು ಯಕ್ಷಿಯ ನಡುವಿನ ಸಂಘರ್ಷವಾಗಿದೆ. ಮಾತೃ ಪ್ರೇಮದ ನಡುವೆಯೂ ಯಕ್ಷಿಯೂ ತನ್ನ ಕಾಮನೆಗಳನ್ನು ಪೂರೈಸಿಕೊಳ್ಳುತ್ತಾಳೆ. ದೈವಿಕ ನೆಲೆಯಾಗಿ ಕಾಣದ ಯಕ್ಷಿಯು ಕೂಡಾ ಇಲ್ಲಿ ಸಹಜವಾಗಿಯೇ ಸ್ತ್ರೀಯಾಗುತ್ತಾಳೆ. ಮತ್ತು ಲಕ್ಕಬ್ಬಲೆ ತನ್ನ ನೋವು ಸಂಕಟಗಳ

ನಡುವೆಯೂ ಬದುಕುವ ಚೈತನ್ಯವನ್ನು ಉಳಿಸುತ್ತಾಳೆ. ಚಕೋರಿಯ ಯಕ್ಷಿ, ಮುದಿಜೋಗ್ತಿಯ ದೈವವಾಗಿಯೂ ಕಾಣುತ್ತಾರೆ. ಶಿಖರ ಸೂರ್ಯದಲ್ಲಿಯೂ ಕೂಡಾ ಹೆಣ್ಣು ಸಮೃದ್ಧ ಕಾಮವಾಗಿ, ಜೀವ ಚೈತನ್ಯದ ಸೆಲೆಯಾಗಿ ವಿದ್ಯುಲ್ಲತೆ ಗೌರಿ ಪಾತ್ರ ಬಿಟ್ಟರೆ ಉಳಿದ ಪಾತ್ರಗಳೆಲ್ಲವೂ ಕೂಡಾ ಒಂದು ತೆರವಾಗಿ ಪುರುಷನ ನೆಲೆಯಲ್ಲಿಯೇ ತಮ್ಮ ಅಸ್ತಿತ್ವ ಕಂಡುಕೊಂಡದ್ದವು. ಗೌರಿಯ ಶಿವಾಪುರದ ಯಾತ್ರೆಯ ಸಂದರ್ಭದಲ್ಲಿನ ಬರುವ ಕಥೆಗಳೆಲ್ಲವೂ ಹೆಣ್ಣಿನ ಮೌಲ್ಯಗಳನ್ನು ಹೆಣ್ಣಿನ ಅಗತ್ಯತೆಯನ್ನು ಒತ್ತಿ ಹೇಳುತ್ತದೆ. ಪುಣ್ಯಕೋಟಿ ಕಥೆ, ಕರಿಮಾಯಿಯ ಕಥೆ, ತಾಯಿಯ ಮೌಲ್ಯ ಪ್ರತಿನಿಧಿಯಾದ ರೇಣುಕಾ, ಮುಂತಾದ ಕಥೆಗಳು ಮುಖ್ಯವಾಗುತ್ತವೆ. ಹೆಣ್ಣಿನ ಬಗ್ಗೆ ಬರುವ ಈ ಕಥೆಗಳಲ್ಲಿ ಈ ಸಾಲುಗಳು ಮುಖ್ಯವೆನಿಸುತ್ತದೆ. ''ತಾಯಿಗೆ ಸ್ವಾರ್ಥವಿಲ್ಲ. ಅಹಂಕಾರವಿಲ್ಲ. ಪಕ್ಷಪಾತವಿಲ್ಲ. ತಾಯಿ ಗಾಳಿ- ನೀರಿನ ಹಾಗೆ ಒಂದು ವಸ್ತು ಹೆತ್ತುದೆಲ್ಲವನ್ನು ಪ್ರೀತಿಸುತ್ತಾ, ಬೆಳೆಸುತ್ತ ಹಿತಕಾರಿಯಾಗುತ್ತಾಳೆ. ತಾಯಿ ಮಕ್ಕಳಿಗೆ ಕತೆ ಹೇಳುತ್ತಾಳೆ. ಕತೆಗಳಿಂದ ನೆನಪುಗಳನ್ನು ಕಾಪಾಡಿಕೊಡುತ್ತ ಭವಿಷ್ಯವನ್ನು ತಿದ್ದುತ್ತಾಳೆ. ಕಾಲವನ್ನು ತುಂಡು ಮಾಡುವುದಿಲ್ಲ. ಅಖಂಡವಾಗಿಡುತ್ತಾಳೆ. ಕಾಲವನ್ನು ನೆನಪುಗಳಿಂದ ಬಗ್ಗಿಸಿ ಅದನ್ನು ವರ್ತುಲ ಮಾಡುತ್ತಾಳೆ.''[18] ಕಂಬಾರರರು ಹೆಣ್ಣನ್ನು ನೋಡಿರುವ ದೃಷ್ಠಿಕೋನಕ್ಕೆ ಈ ಮೇಲಿನ ಸಾಲುಗಳೇ ಮುಖ್ಯವಾಗುತ್ತದೆ. ಅದಕ್ಕೆ ಹೊರತಾಗಿ ಹೆಣ್ಣು ಕೇವಲ ಕಾಮದ ಉದ್ದೇಶ ಈಡಾದರೂ ಅದು ಕೇವಲ ಗಂಡಿನ ಅಹಂಕಾರದಿಂದ ಎಂದು ಅನಿಸುತ್ತದೆ. ಹೆಣ್ಣಿನ ಬಗೆಗಿನ ಭಿನ್ನ ದೃಷ್ಠಿಕೋನ ಈ ಕೃತಿಗಳಲ್ಲಿ ಸಾಧ್ಯವಾಗಿವೆ.

## ಕೊನೆಟಿಪ್ಪಣಿ

1. ಚಂದ್ರಶೇಖರ ಕಂಬಾರ, ಶಿಖರಸೂರ್ಯ, ಪುಟ-215
2. ಚಂದ್ರಶೇಖರ ಕಂಬಾರ, ಚಕೋರಿ, ಪುಟ-61.
3. ಅದೇ ಪುಟ - 11
4. ಅದೇ ಪುಟ - 69
5. ಅದೇ ಪುಟ - 89
6. ಅದೇ ಪುಟ - 75
7. ಅದೇ ಪುಟ - 79
8. ಅದೇ ಪುಟ - 167
9. ಚಂದ್ರಶೇಖರ ಕಂಬಾರ, ಶಿಖರಸೂರ್ಯ. ಪುಟ-369
10. ಅದೇ ಪುಟ - 371
11 ಅದೇ ಪುಟ - 207
12. ಅದೇ ಪುಟ - 236
13. ಅದೇ ಪುಟ - 386
14. ಅದೇ ಪುಟ - 275
15. ಅದೇ ಪುಟ - 273
16. ಅದೇ ಪುಟ - 117
17 ಅದೇ ಪುಟ - 147
18 ಅದೇ ಪುಟ - 317

# ಅಧ್ಯಾಯ : 6

## ನಿರೂಪಣಾ ಕ್ರಮಗಳು

ಕನ್ನಡ ಸಾಹಿತ್ಯ ಸಂದರ್ಭದಲ್ಲಿ ಮುಖ್ಯ ಲೇಖಕರೆಲ್ಲರೂ ಕೂಡಾ ತಮ್ಮ ಕಾಲದ ಅನೇಕ ರೀತಿಯ ಬಿಕ್ಕಟ್ಟುಗಳನ್ನು, ಆತಂಕಗಳನ್ನು ತಮ್ಮ ಕೃತಿಯ ಮೂಲಕ ವಿವರಿಸಲೆತ್ನಿಸಿದವರು. ವಸ್ತು, ಕಥೆ, ನಿರೂಪಣೆ, ಪ್ರಕಾರಗಳು, ಎಲ್ಲವನ್ನೂ ಕೂಡಾ ಭಿನ್ನ ರೀತಿಯಲ್ಲಿ ಸಂಯೋಜಿಸಿದ ಕ್ರಮ ವಿಶಿಷ್ಠವಾದದ್ದು. ಅನೇಕ ರೀತಿಯ ಕಥೆ ಹೇಳುವ ಕ್ರಮವನ್ನು ಕೂಡಾ ತಮ್ಮ ಕಾಲದಲ್ಲಿನ ಅಗತ್ಯತೆಗೆ ತಕ್ಕ ಹಾಗೆ ರೂಪಿಸಿಕೊಂಡವರು. ಕಾಲದ ಅಗತ್ಯತೆಯು ಕೂಡಾ ಕಥೆ ಹೇಳುವುದರ ಮೇಲೆ ಪ್ರಭಾವ ಬೀರುವುದನ್ನು ಕಾಣಬಹುದು. ಕಾಲವನ್ನು ಭೂತ;ವರ್ತಮಾನ, ಭವಿಷತ್‌ಗಳೆಂದು ವಿಂಗಡಿಸಿ ವರ್ತಮಾನದ ಸಂಗತಿಗಳೇ ಮುಖ್ಯ ಎಂದೂ ಭಾವಿಸಿದ ನಿರೂಪಣೆಗಳು ಇವೆ. ಹಾಗೆಯೇ ಭೂತ-ವರ್ತಮಾನ-ಭವಿಷತ್‌ಗಳನ್ನು ಒಂದೇ ಎನ್ನುವ ಹಾಗೇ ಹೇಳುವ ನಿರೂಪಣೆಗಳು ಕನ್ನಡ ಸಾಹಿತ್ಯದಲ್ಲಿವೆ. ಮಾಸ್ತಿ, ಅಡಿಗರಿಗೆ, 'ಭೂತ' ತುಂಬಾ ಮುಖ್ಯವಾಗಿದ್ದು, ವರ್ತಮಾನದಲ್ಲಿಯ ಸಂದರ್ಭದಲ್ಲಿನ ಅನೇಕ ಸಂಗತಿಗಳು, ಬಿಕ್ಕಟ್ಟುಗಳಿಗೆ 'ಭೂತವೇ' ಹೆಚ್ಚು ಸೂಕ್ತ ಎಂಬ ನಿಲುವು ಇವರದು. ಈ ಕಾರಣಕ್ಕಾಗಿಯೇ ಮಾಸ್ತಿಯವರ ಕಥೆಗಳೆಲ್ಲವೂ ವರ್ತಮಾನದಲ್ಲಿ ಶುರುವಾದರೂ 'ಭೂತದ' ಕಡೆಗೆ ಚಲಿಸುತ್ತದೆ. ಈ ಮೂಲಕವೇ ಕಾಲವನ್ನು ವಿಂಗಡಿಸದ ಮತ್ತು ಕೂಡಿಸುವ ಚಕ್ರೀಯ ನೆಲೆಯಿರುವುದನ್ನು ಕಾಣಬಹುದು.

ಕಂಬಾರರು ಈ ಎರಡು ಕೃತಿಗಳ ಬಗ್ಗೆ ಹಿಂದಿನ ಅಧ್ಯಾಯಗಳಲ್ಲಿ ಚರ್ಚಿತವಾದ ಕಥನಕ್ರಮದ ಮೂಲಕವೇ ಭೂತ-ವರ್ತಮಾನಗಳನ್ನು ಮೀರುವ ವಾಸ್ತವ ನೆಲೆಯನ್ನು ಮೀರುವ ಮುಖ್ಯ ನೆಲೆಗಳು ಚರ್ಚಿತವಾಗಿವೆ. ಇಂತಹ ವಾಸ್ತವವಾದೀ ನೆಲೆಯಲ್ಲಿನ ಕಥೆಯನ್ನು ಹೇಳಬೇಕಾದ ಸಂದರ್ಭದಲ್ಲಿ ಅನೇಕ ಬಗೆಯ ನಿರೂಪಣೆಗಳನ್ನು ಅನುಸರಿಸಬೇಕಾಗುತ್ತದೆ. ಮತ್ತು ಎಲ್ಲಾ ವಸ್ತು, ಪಾತ್ರಗಳು, ಮೂಲಕವೇ ಕಥೆಯ ನಿರೂಪಣೆಯು ಸಾಗುತ್ತದೆ. ಕಂಬಾರರ ಸಿಂಗಾರವ್ವ ಮತ್ತು ಅರಮನೆಯ ಕಾದಂಬರಿಯ ನಿರೂಪಣಾ ಕ್ರಮವನ್ನು ಗಮನಿಸಿದಾಗ ಇದು ಸ್ಪಷ್ಟವಾಗುತ್ತದೆ. ವರ್ತಮಾನದಲ್ಲಿದ್ದುಕೊಂಡು ಅಜ್ಜಿ ವಾಸ್ತವದಲ್ಲಿ ಕಥೆಯನ್ನು ಹೇಳುತ್ತಿದ್ದಾಗಲೂ ಕೂಡಾ ಭೂತದಲ್ಲೂ ಪಾತ್ರವಾಗಿ ಬರುತ್ತಾಳೆ. ಕಥೆಯ ಮಧ್ಯೆ ಮಧ್ಯೆ ವಿರಾಮವಿದೆ. ಇಂತಹ

ನಿರೂಪಣೆಯ ಮೂಲಕವೇ ಕಂಬಾರರು ಜಾನಪದದ ನಿರೂಪಣಾ ಕ್ರಮಗಳನ್ನು ಬಳಸಿಕೊಂಡಿದ್ದರೆ ಕಾಲ, ಪ್ರದೇಶ, ವಸ್ತು ಜಗತ್ತು ಎಲ್ಲವನ್ನೂ ಮೀರುವ ನಿರೂಪಣಾ ಕ್ರಮ ಕಂಬಾರರ ವೈಶಿಷ್ಟ್ಯವಾಗಿದೆ. ಕಥೆಯ ಎಲ್ಲವನ್ನೂ ನಿರೂಪಣೆಯಲ್ಲಿ ದುಡಿಸಿಕೊಳ್ಳುತ್ತಾರೆ. ದೇವನೂರು ಮಹಾದೇವರ ಕುಸುಮಬಾಲೆ ಕಾದಂಬರಿಯಲ್ಲಿ ಬರುವ ನಿರೂಪಣಾ ಕ್ರಮವು ಕೂಡಾ ತುಂಬಾ ವಿಶಿಷ್ಟವೆನಿಸುತ್ತದೆ. ಕಂಬಾರರು ಹೇಗೆ ಜಾನಪದೀಯ ತಂತ್ರಗಳನ್ನು ಬಳಸಿಕೊಳ್ಳುತ್ತಾರೆಯೋ ಹಾಗೆಯೇ ದೇವನೂರರ ಕುಸುಮಬಾಲೆಯಲ್ಲಿನ ಜೋತ್ಯಮ್ಮದಿರು ಹೇಳುವ ಕಥೆ, ಮಂಚ ಮಾತನಾಡುವುದು ಇವುಗಳ ಮೂಲಕವೇ ವಾಸ್ತವದಲ್ಲಿನ ನೆಲೆಯನ್ನು ಕೂಡಾ ಹೇಳುತ್ತಿದೆ. ಕಂಬಾರರು ಮಂಡಿಸುವ ಪುರಾಣಗಳಿಗೆ ಈ ರೀತಿಯ ವಾಸ್ತವ ನೆಲೆಯಲ್ಲಿನ ನಿರೂಪಣೆಯು ಕೂಡಾ ಮುಖ್ಯ ಪಾತ್ರವಹಿಸುತ್ತದೆ. ಇಂತಹ ಆಧುನಿಕ ಕಾಲದಲ್ಲೂ ಕೂಡಾ ಕಂಬಾರರು ಗತಕಾಲಕ್ಕೆ ಸಾಗುತ್ತಾರೆ. ಇಂತಹ 'ಗತದ ನಿರೂಪಣೆ ಮಾಡಲು ಕಂಬಾರರಿಗೆ ಭಾಷೆ, ವಸ್ತು, ನಿರ್ವಹಿಸುವ ಕ್ರಮ ಯಾವುದರಿಂದ ಬೇಕಾದರೂ ಆಗಬಹುದು. ಪ್ರಸ್ತುತ ಈ ಅಧ್ಯಾಯದಲ್ಲಿ ಈ ಎರಡು ಕೃತಿಗಳಲ್ಲಿ ಬರುವ ಮುಖ್ಯ ನಿರೂಪಣಾ ನೆಲೆಗಳನ್ನು ಅರಿಯುವುದು.

ಚಕೋರಿಯು ಕಂಬಾರರು ಹೇಳುವ ಹಾಗೆ ಇಪ್ಪತ್ತೇಳು ಕಲೆಗಳ ಮೂಲಕ ರೂಪುಗೊಂಡ ಕೃತಿ. ಸಂಗೀತ ನೃತ್ಯ, ಪುರಾಣ, ಕಥೆ, ಚರಿತ್ರೆ, ನಾದ, ಕನಸು, ಮುಂತಾದವುಗಳ ಮೂಲಕವೇ ಕಥೆಯು ಸಾಗುತ್ತದೆ. ಇವುಗಳ ಜೊತೆಗೆ ಕಾವ್ಯ, ನಾಟಕ, ಕಾದಂಬರಿ, ಭಾವಗೀತೆ, ಜಾನಪದಗೀತೆ, ತ್ರಿಪದಿಗಳು, ಕತೆ, ಪುರಾಣದ ಲಕ್ಷಣಗಳನ್ನುಳ್ಳ ಅನೇಕ ಪ್ರಕಾರಗಳ ಮೂಲಕ ಪ್ರಕಟಗೊಂಡಿವೆ. ಇವುಗಳು ಒಂದು ಮತ್ತೊಂದನ್ನು ಒಳಗೊಂಡು ಹೊಸರೀತಿಯ ನಿರೂಪಣೆಯನ್ನೇ ಇಲ್ಲಿ ಕಾಣಬಹುದು. ಮುಖ್ಯವಾಗಿ ಚಕೋರಿಯ ನಿರೂಪಣೆಯನ್ನು ಮಾಡುವುದು ಕನಸುಗಳು. ಇದು ತಂತ್ರವು ಹೌದು. ಪಾತ್ರವು ಆಗಿದೆ. ಇಂತಹ ಕನಸುಗಳಾದರೂ ಮನೋಕಾಯಗಳ ಮೂಲಕವೇ ಜಾಗೃತಸ್ಥಿತಿ, ಸುಪ್ತ, ಅ ಪ್ರಜ್ಞೆಯ ತನಕ ಚಲಿಸುತ್ತವೆ. ಈ ಕಾರಣದಿಂದಲೇ ಮಾಂತ್ರಿಕ ನೆಲೆ, ಜನಪದ, ಪುರಾಣ, ಅತಿಮಾನುಷ ಇಂತಹ ಅವಾಸ್ತವವಾದಿ ಮಾರ್ಗವನ್ನು ಬಳಸಿಕೊಳ್ಳುವಲ್ಲಿ ಯಶಸ್ವಿಯಾಗಿದ್ದಾರೆ. ಚಕೋರಿಯ ನಿರೂಪಣೆಯ ಕ್ರಮದಲ್ಲಿಯೇ ಕಂಬಾರರು ಆಧುನಿಕತೆಯನ್ನು ಮೀರುವ ತಮ್ಮ ನಿಲುವನ್ನು ಕಾಣಬಹುದು. ಇಂತಹ ನಿರೂಪಣಾ ಕ್ರಮವು ಅನೇಕ ಬಗೆಯ ಸಾಹಿತ್ಯ ಪ್ರಕಾರಗಳನ್ನು ಒಳಗೊಳ್ಳಲು ಸಾಧ್ಯವಾಗಿವೆ.

ಚಕೋರಿಯು ನಿರೂಪಕರಾದ ಕನಸುಗಳು ಇಡೀ ಕಥೆಯಲ್ಲಿ ಮತ್ತೆ ಮತ್ತೆ ಪ್ರವೇಶಿಸುತ್ತಾ ವಿವರಿಸುತ್ತಾ ಪಾತ್ರಗಳನ್ನು ಹೇಳುತ್ತವೆ. ಇಂತಹ ಕನಸುಗಳಿಗಿರುವ ನಿಷ್ಕಲ್ಮಶ ಮುಗ್ಧತೆಯು ಕೂಡಾ ಮನುಷ್ಯನಿಗೆ ಇಲ್ಲದೇ ಇರುವುದನ್ನು ಕಾಣಬಹುದು. ಇಂತಹ ಕನಸುಗಳಾದರೂ '' ಎಲ್ಲಾ ಕಾಲ ಬಲ್ಲ ಸೀಮೆಗೆ ಸಲ್ಲುವ, ಎಲ್ಲಾ ವಯಸ್ಸಿನ ಎಲ್ಲಾ ಮನಸ್ಸಿನ ಆದಿಯ ಕಾಲದಿಂದ ಹಾಂಗೇ ಉಳಿದು ಬಂದಿರುವ ಕನಸುಗಳು''[1]

ಹೀಗೆ ಕನಸುಗಳ ಮೂಲಕವೇ ಶುರುವಾಗುವ ನಿರೂಪಣೆಯು ಮತ್ತೆ ಮತ್ತೆ ದೇವರನ್ನು ಸ್ಮರಿಸುತ್ತೇವೆ. ಬೇಡುತ್ತಲೇ ಮರುಕಪಡುತ್ತವೆ. ಚಂದಮುತ್ತನು ಕಾಡಿನಲ್ಲಿ ಯಕ್ಷಿಯನ್ನು ಮದುವೆಯಾಗುವ ಸಂದರ್ಭದಲ್ಲಿಯು ಕೂಡಾ ಯಕ್ಷಿ ಮತ್ತು ಚಂದಮುತ್ತನನ್ನು ಜೊತೆ ಸೇರಿಸುತ್ತಾರೆ. ವಿರಹದಲ್ಲಿರುವ ಚಂದಮುತ್ತನಿಗೆ ಯಕ್ಷಿಯನ್ನು ತಂದು ತೋರಿಸುತ್ತಾರೆ. ಚಿನ್ನಮುತ್ತನ ಬಗ್ಗೆ ಕನಸುಗಳಿಗೆ ದ್ವೇಷವಿದೆ. ಹಂಸ ಪಕ್ಷಿಯನ್ನು ಕೊಂದ ಸಂದರ್ಭದಲ್ಲಿ ಕನಸುಗಳು ವಿರಹಿ ಹಂಸ ಪಕ್ಷಿಯ ಮಾತನ್ನು ಕೇಳಿ ಚಿನ್ನಮುತ್ತನನ್ನು ಬರಹೇಳುತ್ತೇವೆ. ಯಕ್ಷಿ ಮತ್ತು ಚಂದಮುತ್ತನ ಪ್ರೇಮವನ್ನು ವಿವರಿಸುತ್ತೇವೆ. ಲಕ್ಕಬ್ಬೆಯ ನೋವನ್ನು ವ್ಯಕ್ತಪಡಿಸುತ್ತೇವೆ. ಹೀಗೆ ಕೃತಿಯ ಉದ್ದಕ್ಕೂ ಕೂಡಾ ಒಂದು ಮತ್ತೊಂದನ್ನು ಸೇರಿಸಿ ಮುಂದುವರಿಸುವ ನೆಲೆಯಲ್ಲಿ ಕನಸುಗಳು ಪ್ರಕಟಗೊಂಡಿವೆ. ಇವುಗಳು ತಂತ್ರಗಳಷ್ಟೇ ಅಲ್ಲ ದೇ ವಾಸ್ತವ ನೆಲೆಯನ್ನು ಮೀರುವ ಕ್ರಮವೂ ಕೂಡಾ ಆಗಿದೆ. ಇಂತಹ ಕ್ರಮದ ಮೂಲಕವೇ ಭೂತ-ವರ್ತಮಾನದ ನೆಲೆಗಳನ್ನು ಒಳಗೊಳ್ಳುತ್ತದೆ.

ಚಕೋರಿಯ ದೈವಜಗತ್ತು - ಮಾನವಜಗತ್ತು, ಆಕಾಶ-ಭೂಮಿ, ಅದೋಲೋಕ -ಹಗಲು - ರಾತ್ರಿ, ಬಿಂಬ - ಪ್ರತಿಬಿಂಬ ಭಿನ್ನ ನೆಲೆಗಳನ್ನು ಒಳಗೊಳ್ಳುತ್ತಲೇ ಅವುಗಳನ್ನು ಒಂದಾಗಿಸುವ ಕ್ರಮವು ವಿಶಿಷ್ಟವಾಗಿದೆ. ಸಂಗೀತ, ನೃತ್ಯ, ನಾದಗಳು, ಸಂಭಾಷಣೆ, ಸ್ವಗತಗಳು, ಕಾವ್ಯಾತ್ಮಕತೆ ಇವುಗಳು ಕೂಡಾ ಕಾದಂಬರಿಯು ಉದ್ದಕ್ಕೂ ಪ್ರತ್ಯೇಕ ಘಟಕಗಳನ್ನಾಗಿಯಾದರೂ ಕಾಣಬಹುದು. ಇಲ್ಲವೇ ಒಂದೇ ಘಟಕವನ್ನೇ ಒಳಗೊಂಡಿವೆ. ಮಾನವ ಜಗತ್ತನ್ನು ನಿಯಂತ್ರಿಸುವ ಪ್ರಭಾವ ಬೀರುವ ದೈವ ಜಗತ್ತು ಇಲ್ಲಿದೆ. ಮತ್ತು ದೈವ ಜಗತ್ತನ್ನು ಶಪಿಸುವ ಅದನ್ನು ಒಳಗೊಳ್ಳುವ ಮೂಲಕವೇ ದೈವಜಗತ್ತನ್ನು ಕೂಡಾ ಮಾನವೀಯಗೊಳಿಸುತ್ತಿದೆ.

ಚಂದಮುತ್ತ- ಯಕ್ಷಿಯರ ನಡುವಿನ ಈ ಸಂಬಂಧವೇ ದೈವ ಮತ್ತು ಮಾನವ ಜಗತ್ತುಗಳನ್ನು ಒಂದಾಗಿಸುವ ನೆಲೆಯಿದೆ. ಇಂತಹ ಸಂದರ್ಭದಲ್ಲೂ ಕೂಡಾ

ಆಕಾಶ-ಭೂಮಿಯ ನಡುವೆ ಸಂಚರಿಸುವ ಮಾರ್ಗವು ಆಗಿದೆ. ಚಂದಮುತ್ತನ ಕೊಳಲು ಗಾನದಿಂದಲೇ ಚಂದಮನಿಂದ ಹೊರ ಬರುವ ಜಿಂಕೆ ಮರಿಯ ರೂಪವು ಇಡೀ ಲೋಕವನ್ನೇ ಸಂದರ್ಶಿಸಿ ವಾಪಸ್ಸಾಗುತ್ತದೆ. ''ಬೆಳಗಿನ ಸುಗ್ಗಿ ಒಕ್ಕೋಣ ಹತ್ತುಬಾರೋ ಹುಡುಗಿ' ಎಂದಿತು ಚಂದ ಮುತ್ತ ಹೋಗಿ ಬೆಳ್ಳಿಯಂತೆ ಮಿರು ಮಿರುಗುವ ಜಿಂಕೆ ಮರಿಯ ಬೆನ್ನೇರಿ ಗಟ್ಟಿಯಾಗಿ ಕತ್ತು ತಬ್ಬಿಕೊಂಡ. ಹುಯ್ಯಲಿಟ್ಟಂತೆ ಸುಂಟರಗಾಳಿ ಬೀಸಿ ಭೂಮಿ ಗಿರ್‍ರನೆ ತಿರುಗಿ ನಾಡು ಲೋಕ ವಿಕಾಸವಾಗುವಂತೆನಿಸಿ ಚಂಗನೆ ನೆಗೆಯಿತು. ಜಿಂಕೆ ಮೇಲು ಮೇಲಕ್ಕೆ ಮ್ಯಾಲಿನ ಮಿರಿಲೋಕಕ್ಕೆ ಈಗ ನೋಡಿದರೆ ಸಾವಳಗಿ ಶಿವಾ ಶಿವಾ ಯಕ್ಷಿ ಬೇರೆಯಲ್ಲ. ಜಿಂಕೆ ಬೇರೆಯಲ್ಲ. ಯಕ್ಷಿ ಜಿಂಕೆ ಎರಡೊಂದಾಗಿ ತನ್ಮಯ ಪ್ರತಿಬಿಂಬವಾಗಿ ಕ್ಷಿತಿಜದಾಚೆಗೆ ನೇರಿಕೊಂಬ ರಸ್ತೆಯ ರಚಿಸಿ ತೇಲಾಡಿ ದಾಟಿದರು. ಸುಲಭದಲ್ಲಿ ''[2] ಜಿಂಕೆ-ಯಕ್ಷಿ ಬೇರೆ ಬೇರೆಯಲ್ಲದೆ ಏಕವಾಗುವುದು, ಎಲ್ಲ ಲೋಕಗಳು ಕೂಡಾ ಒಂದಾಗುವ ಮೂಲಕವೇ ಕಥೆಯು ಮುಂದುವರಿಯುತ್ತದೆ. ಸಂಗೀತವು ಕೂಡಾ ಸಂಭಾಷಿಸುವುದನ್ನು ಕಾಣಬಹುದು. ಮಹಾನುಭಾವನು ಕೆಡಿಸಿದ ರಾಗಗಳೇ ವಿಕಾರವಾಗುವುದು. ಸಂಗೀತದ ಲಯವನ್ನೇ ಕೆಡಿಸಿ ವಿಕೃತಗೊಳಿಸುವುದನ್ನು ಕಾಣಬಹುದು.

ಲಕ್ಕಬ್ಬೆಯು ಮಾತೃಪ್ರೇಮವು ಎಲ್ಲ ಲೋಕವನ್ನು ಒಳಗೊಂಡು ತನ್ನ ಮಗನನ್ನು ಪಡೆಯುವಂತವಳು. ಆಕಾಶದಲ್ಲಿ ಯಕ್ಷಿಯನ್ನು ಕೂಡಾ ಇಲ್ಲಿನಿಂದಲೇ ಕಂಗೆಡಿಸಬಲ್ಲಂತವಳು. ಇಂತಹ ಪ್ರೀತಿಯಿಂದಲೇ ಕಥೆಯು ಈ ಲೋಕದಷ್ಟೇ ಅಲ್ಲದೆ ಬೇರೊಂದು ಲೋಕವನ್ನು ಪ್ರವೇಶಿಸಬಹುದು. ಚಕೋರಿಯು ನಿರೂಪಣೆಯಲ್ಲಿರುವ ಮತ್ತೊಂದು ವಿಶೇಷತೆಯೆಂದರೆ ಇಲ್ಲಿ ಎಲ್ಲಾ ಸಾಹಿತ್ಯ ಪ್ರಕಾರಗಳು ಕೂಡಾ ಕಥೆಯನ್ನು ಹೇಳುವಲ್ಲಿ ತಮ್ಮ ಗಾತ್ರಗಳನ್ನು ವಿಸ್ತರಿಸಲು ಕುಗ್ಗುವ ಸಾಮರ್ಥ್ಯಗಳನ್ನು ಪಡೆದುಕೊಂಡಿವೆ. ಇಲ್ಲಿ ಬರುವ ಕಾವ್ಯ,ಗದ್ಯ, ನಾಟಕ, ಜಾನಪದ ಕಥೆಯ ದಾಟಿಗಳ, ಜಾನಪದ ಹಾಡಿನ ಲಯಗಳು, ಸ್ವಗತಗಳು, ಸಂಭಾಷಣೆಗಳು ಕೂಡಾ ಒಟ್ಟು ಕೃತಿಯ ಅಂದವನ್ನು ಹೆಚ್ಚಿಸಿವೆ. ಸಂಗೀತವು ಇಲ್ಲಿ ತೀವ್ರವಾದ ಅನುಭವದ ರೂಪವನ್ನು ಪಡೆದುಕೊಂಡಿವೆ. ಇಡೀ ಕೃತಿಯೇ ಸಂಗೀತದಂತೆ ಝೇಂಕರಿಸುತ್ತದೆ. ಅಂತಹ ಸಂಗೀತಕ್ಕೆ ಇರುವ ಶಕ್ತಿಯಾದರೂ 'ಭೃಂಗೀಶನ ಜಂಗಿನ ಗದಲಿಯ ಗಲಿಯ ನಾದ, ತಮ್ಮಟೆ ವಾದ್ಯಗಳ ಒರಟು ನಾದಗಳಲ್ಲಿ ಕಂಚು ಕಹಳೆಯ ಮೊಳಗಿನಲ್ಲಿ ಕಗ್ಗಿತ್ತಲು ಕಾಡು ಗೀಳಿಟ್ಟು ಪ್ರತಿಧ್ವನಿಸಿ ನಿನಾದಿಸಿತು''[3] ಇಂತಹ ಸಂಗೀತವು ಕೂಡಾ ನಿರಂತರವಾಗಿ ಹೊಸ ಹೊಸ ಆವಿಷ್ಕಾರಗಳಿಗೆ ಒಳಗಾಗುತ್ತಲೇ

ಮುಂದುವರಿಯುತ್ತದೆ. ಈ ಕಥೆಯ ಉದ್ದಕ್ಕೂ ಇಂತಹ ಸಂಗೀತವನ್ನು ಹೊಸ ರೀತಿಯಲ್ಲಿಯೇ ಪ್ರಕಟಗೊಳ್ಳುತ್ತದೆ.

ಚಕೋರಿಯು 'ವಚನ ಕಥಾನಕ' ದ ಮಾದರಿಯನ್ನು ಎಂದಿದ್ದರೂ ಕೂಡಾ ಇದರೊಳಗೆ ನಾಟಕದ ಸಂಭಾಷಣೆಗಳು ಕೂಡಾ ಅಲ್ಲಲ್ಲಿ ಕಾಣುತ್ತವೆ. ಮೂಲತಃ ಕಂಬಾರರು ನಾಟಕಕಾರರು ಆಗಿರುವುದರಿಂದ ಇಲ್ಲಿನ ನಿರೂಪಣೆಯು ಕೂಡಾ ಹೆಚ್ಚು ನಾಟಕೀಯತೆಯನ್ನು ಒಳಗೊಂಡಿದೆ. ಚಂದಮುತ್ತ - ಮಹಾನುಭಾವದ ಈ ದೃಶ್ಯವನ್ನು ನೋಡಬಹುದು.

ಚಂದಮುತ್ತ : ವ್ಯಂಗ್ಯದ ನುಡಿ ನಿನಗೆ ಶೋಭಿಸುವುದಿಲ್ಲ ಶಿವನೆ

ಮಹಾನುಭಾವ : ನಿನಗೆ ಸುಳ್ಳುಕೂಡ

ಚಂದಮುತ್ತ : ನಾನೇನು ಸುಳ್ಳು ಹೇಳಿದೆ ?

ಮಹಾನುಭಾವ : ಹಾಂಗಿದ್ದರೆ ವಿಗ್ರಹ ತಂತಾನೆ ಕೈಯಾರ
ಯಾಕೆ ಮಡಿ ಉಡಲಿಲ್ಲ ?

ಚಂದಮುತ್ತ : ಹಾಗೆಂದು ನಾನುಕೊಚ್ಚಿಕೊಂಡಿಲ್ಲ.[4]

ಚಂದಮುತ್ತ ಮತ್ತು ಮಹಾನುಭಾವರ ಮಾತುಕತೆಗಳಲ್ಲಿ ನಾಟಕೀಯತೆಯ ಶಕ್ತಿ, ಬಿರುಸು ತುಂಬಿರುವುದನ್ನು ಕಾಣಬಹುದು. ಇಂತಹ ನಾಟಕೀಯತೆಯು ಕೇವಲ ನಿರೂಪಣೆಯನ್ನು ಯಾಂತ್ರಿಕವಾಗಿಸದೇ ಒಟ್ಟು ಕೃತಿಯ ಘಟಕಕ್ಕೇ ಪೂರಕವಾಗಿಯೇ ಕಂಡುಬರುತ್ತದೆ.

ಜಾನಪದದ ಕಥೆಯ ದಾಟಿಯಲ್ಲಿರುವ ನಿರೂಪಣೆಯು ಜಾನಪದ ಗೀತೆ, ತ್ರಿಪದಿಗಳನ್ನೊಳಗೊಂಡ ವಿವರಗಳು ಕೂಡಾ ಕೃತಿಯಲ್ಲಿ ಮುಖ್ಯ ಪಾತ್ರವಹಿಸುತ್ತಿವೆ. ಜಾನಪದ ವಿಶಿಷ್ಟ ಮಟ್ಟುಗಳನ್ನು ಬಳಸಿಕೊಳ್ಳುವ ಕಂಬಾರರ ಕ್ರಿಯೆ ವಿಶಿಷ್ಟವಾದದ್ದು. ಅಂತಹ ಕಥೆಯ ನಿರೂಪಣೆಯನ್ನು ಮುದಿಜೋಗ್ತಿಯ ಬಗ್ಗೆ ಹೇಳುವಾಗ ಕನಸುಗಳು ಇಂತಹ ಕಾರ್ಯವನ್ನು ನಿರ್ವಹಿಸುತ್ತವೆ. ಕನಸುಗಳೇ ರೂಪಿಸುವ ಈ ಪದಗಳ ಹಾಡನ್ನು ಗಮನಿಸಬಹುದು.

''ತಿಂಗಳ ನಗೆಯವಳೋ
ನಮ್ಮ ಯಕ್ಷಿ । ಚಿಕ್ಕೆಗಳ ಮುಡಿಯುವವಳೊ

ಎದ್ದುನೋಡೋ ಮುದ್ದುಚಂದ್ರಮ । ಕಾಡಿನಲಿ
ಕೈಲಾಸ ತೂಗಿರುವಳೊ ''[5]

ಇಂತಹ ದಾಟಿಯಲ್ಲಿ ಹಾಡಿನ ರೂಪದಲ್ಲಿರುವಂತವುಗಳು. ಕಂಬಾರರು ಎಂತಹ ಪದ್ಯಗಳನ್ನಾದರೂ ಹಾಡುವುದರ ಮೂಲಕ ಅದಕ್ಕೊಂದು ಹೊಸ ಶಕ್ತಿಯನ್ನು ನೀಡಬಲ್ಲರು. ಇದರ ಮೂಲಕ ಜಾನಪದ ದಾಟಿಯನ್ನು ಕೂಡ ಚಕೋರಿಯ ನಿರೂಪಣೆಯು ಒಳಗೊಂಡಿದೆ.

ಕಂಬಾರರು ತಮ್ಮ ನಿರೂಪಣೆಯಲ್ಲಿ ಮತ್ತೆ ಮತ್ತೆ ಕಾವ್ಯದ ಕಡೆಗೇ ಹೆಚ್ಚು ಗಮನ ಕೊಟ್ಟವರು. ಶಿವಾಪುರದ ಸ್ವರ್ಗದ ಬಗ್ಗೆ ಪರಿತಪಿಸುವ ಹಾಡುಗಳಿವು. ಈ ಕಾರಣಕ್ಕಾಗಿಯೇ ಕೃತಿಯಲ್ಲಿ ಕೇವಲ ಮೂರು ಪದ್ಯಗಳನ್ನೇ ಒಂದು ಅಧ್ಯಾಯವನ್ನಾಗಿಸಿದ್ದಾರೆ! ಸೂರ್ಯಮುತ್ತನು ಕನಸಿನಲ್ಲಿ ಕಂಡದ್ದನ್ನು ಮುಂದೆ ಒದಗಲಿರುವ ದುರಂತತೆಯನ್ನು ಕೂಡಾ ಇವುಗಳು ಸೂಚಿಸುತ್ತವೆ. ಹಾಗೆಯೇ ಕಂಬಾರರು ''ನವಿಲೇ ನವಿಲೇ'' ಪದ್ಯದ ಇನ್ನೊಂದು ರೂಪವು ಅದೇ ಹೆಸರಿನಲ್ಲಿ ಈ ಕೃತಿಯಲ್ಲಿದೆ. ಲಕ್ಕಬ್ಬೆಯ ಕನಸಿನಲ್ಲಿ ಒದಗಲಿರುವ ಮುಂದಿನ ದುರಂತವನ್ನು ಈ ಕವನ ಸೂಚಿಸುತ್ತದೆ. ತೀವ್ರ ತರದ ಸಂಭಾಷಣಾ ರೂಪಗಳು ಕಾದಂಬರಿ ಅಥವಾ ಕಥೆಯಂತಿರುವ ನಿರೂಪಣೆಯು ಕೂಡಾ ಕಾಣುತ್ತೇವೆ. ಚಂದಮುತ್ತ ಮತ್ತು ಕುಲಗುರುವಿನ ಸಂಭಾಷಣೆಗಳು, ಸೇಡುಮಾರಿಯರು ಚಂದಮುತ್ತನ ಜೊತೆಗಿನ ಮಾತುಕತೆಗಳನ್ನು ಗಮನಿಸಬಹುದು. ಕಂಬಾರರ ಇಂತಹ ನಿರೂಪಣೆಗಳ ಮೂಲಕವೇ ಎಲ್ಲಾ ಸಾಧ್ಯತೆಗಳನ್ನು ಒಳಗೊಳ್ಳಬಲ್ಲ ಶಕ್ತಿಯು ಈ ಕೃತಿಯಲ್ಲಿ ಕಾಣುತ್ತದೆ. ಇಂತಹ ನಿರೂಪಣೆಯಲ್ಲಿನ ಕನಸುಗಳು ಕೇವಲ 'ಕಥೆ' ಹೇಳುವುದು ಒಂದು ತಂತ್ರವಾದರೂ ಅದೇ ಮುಖ್ಯವಲ್ಲ. ಇಂತಹ ಕನಸುಗಳಲ್ಲದೆ ಆದಿಮದ ಅನೇಕ ಬಗೆಯ ನಿರೂಪಣೆಗಳು ಕೂಡಾ ಕಾಣಬಹುದು. ಮಹದೇಶ್ವರ ಕಾವ್ಯದ ಜಾನಪದದ ಸ್ವರೂಪ, ನಾಟಕದ ನೆಲೆ, ಭಾವಗೀತೆ, ಹೀಗೆ ಅನೇಕ ಸಾಧ್ಯತೆಗಳನ್ನು ಬಳಸಿಕೊಳ್ಳುತ್ತಲೇ ಬೇರೆ ಬೇರೆ ನೆಲೆಗಳಲ್ಲಿ ಅವಸ್ಥಾಂತರಗಳನ್ನು ಪಡೆದುಕೊಳ್ಳುತ್ತಾ ಹೋಗುತ್ತದೆ. ಬೇರೆ ಬೇರೆ ಜಗತ್ತುಗಳೊಂದಿಗಿನ ಸಂಬಂಧವು ಕೂಡಾ ಏರ್ಪಡುತ್ತದೆ. ಈ ಕಾರಣಕ್ಕಾಗಿಯೇ ಚಕೋರಿಯ ನಿರೂಪಣೆಯಲ್ಲಿ ವೈಶಿಷ್ಟ್ಯವಿರುವುದು ಮತ್ತು ಇಂತಹ ನಿರೂಪಣಾ ತಂತ್ರವು ಕೂಡಾ ಇವತ್ತಿನ ಕಾಲದಲ್ಲಿ ನಾವುಗಳು ಸಂದಿಸಲೇಬೇಕಾದ ಕನಸುಗಳ ಮುಗ್ಧತೆಯ ಕಡೆಗೆ ಚಲಿಸುತ್ತಿರುವುದು.

ಚಕೋರಿಯು ಮುಖ್ಯವಾಗಿ ಸಂಗೀತದಿಂದಲೇ ಮುಕ್ತಿ ಮತ್ತು ಬಂಧನಗೊಂಡ ಕಥೆಯಾದರೆ ಶಿಖರಸೂರ್ಯವು ವಿದ್ಯೆಯಿಂದಲೇ ಜೀವ ಉಳಿಸುವ ಮತ್ತು ಜೀವವಿರೋಧಿಯಾದ ಕಲೆಗಳನ್ನು ಕುರಿತು ಹೇಳುವಂತದ್ದಾಗಿದೆ. ಇಂತಹ ಕಲೆಯು ಪ್ರಕಟಗೊಳ್ಳುವ ಮಾರ್ಗಗಳು, ಕೂಡಾ ಶಿಖರಸೂರ್ಯದಲ್ಲಿ ಕಾಣುತ್ತವೆ. ವಿದ್ಯೆ ಮತ್ತು ಅಧಿಕಾರದ ಸುತ್ತಲೇ ನಡೆಯುವ ಕಥೆಯು ಹೇಗೆ ಇಡೀ ಕುಟುಂಬ, ಸಮಾಜ, ವ್ಯವಸ್ಥೆ, ವ್ಯಕ್ತಿ ಎಲ್ಲವನ್ನು ಆಕ್ರಮಿಸಿ ಬಿಡುವ ನೆಲೆಗಳು ಕೃತಿಯ ಉದ್ದಕ್ಕೂ ಮೈತಾಳಿವೆ. ರಾಜನ ಕಥೆಯನ್ನು ಹೇಳುತ್ತಲೇ ಒಬ್ಬ ಸಾಮಾನ್ಯ ವೈದ್ಯನ ಕಥೆಯು ಕೂಡಾ ನಿರೂಪಿಸುತ್ತದೆ. ರಾಜಪ್ರಭುತ್ವದ ಶಿಥಿಲತೆಯ ಜೊತೆಯಲ್ಲಿಯೇ ಇಡೀ ಸಮುದಾಯ ಕಟ್ಟುವುದನ್ನು ಕಾಣಬಹುದು. ಇಂತಹ ಅನೇಕ ವೈರುಧ್ಯಗಳ ಮೂಲಕವೇ ಕಾದಂಬರಿಯ ನಿರೂಪಣೆಯು ಒಳಗೊಳ್ಳುತ್ತದೆ. ನಿರೂಪಣಾ ಕ್ರಮವನ್ನು ಚಕೋರಿಯಲ್ಲಿ ಕನಸುಗಳು ಹೇಳಿದರೆ ಶಿಖರ ಸೂರ್ಯವು ಕನಕಪುರಿಯ ಇತಿಹಾಸಕಾರರು ನಿರೂಪಿಸುತ್ತಿದ್ದಾರೆ. ಇತಿಹಾಸಕಾರರು ಈ ಕಾದಂಬರಿಯನ್ನು ಹೇಳುತ್ತಿದ್ದಾಗಲೂ ಪಾತ್ರಗಳು, ಘಟನೆಗಳು, ಮಾಂತ್ರಿಕವೆನಿಸುವ ಲೋಕಗಳಲ್ಲಿ  ನಿರೂಪಣೆಯು ಹೆಚ್ಚು ಕಾವ್ಯಾತ್ಮಕವಾಗಿ ಇರುವುದನ್ನು ಕಾಣಬಹುದು. ಇದಕ್ಕೆ ಮುಖ್ಯ ಕಾರಣ ಕಾದಂಬರಿಯ ವಸ್ತುವು ಆಗಿದೆ. ಚರಿತ್ರೆಯು ಮೂಲತಃ ಗದ್ಯಾತ್ಮಕವಾದದ್ದು. ಇಂತಹ ಹಿನ್ನಲೆಯಲ್ಲಿ ಇತಿಹಾಸಕಾರರು ಭಾಷೆಯು ಕೂಡಾ ಹಾಗೆಯೇ ಇದೆ. ಚಕೋರಿಯಲ್ಲಿನ ಗೇಯತೆ, ನಾದ, ಕಾವ್ಯಾತ್ಮಕ ನೆಲೆಗಳು ಶಿಖರ ಸೂರ್ಯದಲ್ಲಿ ಇಲ್ಲದೇ ಇರುವುದಕ್ಕೆ ಇದು ಕೂಡಾ ಕಾರಣವಾಗಿರಬಹುದು. ಇತಿಹಾಸಕಾರರನ್ನು ಉಪಯೋಗಿಸಿಕೊಳ್ಳಲು ಲೇಖಕರೇ ಹೇಳುವ ಹಾಗೆ ''ಹೇಳುವವರು ಇತಿಹಾಸಕಾರರಾದ್ದರಿಂದ ನಿರೂಪಣೆಯ ಭಾಷೆಯನ್ನು ನಿರ್ಭಾವುಕ ಹಾಗೂ ನಿರ್ಲಿಪ್ತವಾಗಿಸುವ ಕಡೆಗೆ ಗಮನ ಕೊಟ್ಟಿದ್ದೇನೆ''[6] ಆದರೆ ಕೆಲವೊಮ್ಮೆ ಇಂತಹ ನಿರ್ಲಿಪ್ತತೆಯನ್ನು ಮೀರಿ ಕಾದಂಬರಿಯ ಹಲವು ಕಡೆ ವಿಶಿಷ್ಟತೆಯನ್ನು ಪಡೆದುಕೊಂಡಿದೆ. ಕಥೆಯನ್ನು ಹೇಳುವವರು ಇತಿಹಾಸಕಾರರೇ ಆದರೂ ಶಿವಾಪುರ, ನಿನ್ನಡಿಗೌರಿಯರ ಬಗ್ಗೆ ಮೃದು ಧೋರಣೆಉಳ್ಳವರಾಗಿ ನಿರೂಪಿಸಿದ್ದಾರೆ. ಶಿಖರಸೂರ್ಯನ ಬಗ್ಗೆ ಮಹಾರಾಣಿಯ ಬಗ್ಗೆ ಕನಕಪುರಿಯ ಬಗ್ಗೆ ಅದರ ಧೋರಣೆಯನ್ನು ಪ್ರಶ್ನಿಸುವ , ಒಪ್ಪದಿರುವುದನ್ನು ಕಾಣಬಹುದು. ಇಂತಹ ತಂತ್ರದ ಮೂಲಕವೇ ಕಂಬಾರರು ನಿಲುವು ಯಾವುದು ಎಂಬುದು ಕೂಡಾ ತಿಳಿಯುತ್ತದೆ.

ಶಿಖರ ಸೂರ್ಯನ ನಿರೂಪಣೆಯಲ್ಲಿ ವಸ್ತುವೇ ಪಾತ್ರವಾಗಿವೆ ಮತ್ತು ಕಥೆಯನ್ನು ನಿರೂಪಿಸುವ ಇತಿಹಾಸಕಾರರು ಕೂಡಾ ಕಥೆಯನ್ನು ಬೆಸೆಯಬಲ್ಲದು ಕಾಲ, ಘಟನೆಗಳನ್ನು, ನಂಬಿಕೆ, ಪುರಾಣಗಳನ್ನು ಕೂಡಾ ಶಿಖರಸೂರ್ಯನು ವಾಸ್ತವವನ್ನು ನಿರೂಪಿಸುವ ತಂತ್ರದ ಮೂಲಕ. ತಾನು ಚಿನ್ನವನ್ನು ಮತ್ತು ಸೈನಿಕರನ್ನು ಮಾಡುವ ವಿದ್ಯೆಯನ್ನು ಕಲಿಯಲು ಇದ್ದಕ್ಕಿದ್ದಂತೆ ಆದೃಶ್ಯವಾದದ್ದನ್ನು ಕಾಲ್ಪನಿಕತೆಯ ಮೂಲಕವೂ ಇಲ್ಲಿ ಸಂಕ್ರನ ಮೂಲಕವೇ ಕಥೆಯನ್ನು ಹೇಳುತ್ತಾರೆ. ಇದರ ನಿರೂಪಕರೇ ಹೇಳುವಂತೆ ''ಕನಕ ಪುರಿಯ ಕಥನ''ಕ್ಕೆ ಮುನ್ನ ಶಿಖರ ಸೂರ್ಯನು ಕಣ್ಮರೆಯಾಗಿದ್ದ ಅವಧಿಯ ಅವನ ಸಾಧನೆಗಳನ್ನು ತಿಳಿಯುವುದಕ್ಕೆ ನಾವು ಮೊದಲೇ ಹೇಳಿದ ಹಾಗೆ ನಮಗಿರೋ ಆಧಾರ ವ್ಯಕ್ತಿ ಸುಕ್ರನೊಬ್ಬನ ಅವನ ಕಥನವೋ ನಂಬಿದರೆ ನಂಬಿ ಬಿಟ್ಟರೆ ಬಿಡಿ'ಅಥವಾ 'ಒಂದಾನೊಂದು ಕಾಲದಲ್ಲಿ ಹದ್ದಿನ ತಲೆಯ ಒಬ್ಬ ರಾಕ್ಷಸನಿದ್ದ' - ಮಾದರಿಯದು ಈ ಜನಪದ ಪುರಾಣ ಕಥೆಗಳಲ್ಲಿ ಕೂಡಾ ಇತಿಹಾಸ ಅಡಗಿರುತ್ತದೆಯೆಂದು ವಿದ್ವಾಂಸರು ಹೇಳಿರುವುದರಿಂದ ಅದನ್ನೇ ನಿಮ್ಮ ಮುಂದೆ ಬಿಚ್ಚಿಡುತ್ತಿದ್ದೇವೆ''[7] ಇಂತಹ ಇತಿಹಾಸಕಾರರ ನಿರೂಪಣೆಯು ಕೂಡಾ ಜಾನಪದ ಕತೆಯಲ್ಲಿರುವ ಮಾಂತ್ರಿಕತೆಯನ್ನು ಪಡೆದುಕೊಂಡಿದೆ ಎಂಬುದಕ್ಕೆ ಶಿಖರ ಸೂರ್ಯನು ಹದ್ದಿನ ಬೆಟ್ಟವನ್ನು ಹೇಗೆ ಹತ್ತಿದ ಎಂಬುದರ ವಿವರಣೆಯು ಮುಖ್ಯವಾಗುತ್ತದೆ.

ಇತಿಹಾಸಕಾರರೇ ಇದೇ ಕಥೆಯನ್ನು ಹೇಳುತ್ತಿದ್ದಾಗಲೂ ಕೂಡಾ ಶಿಖರಸೂರ್ಯನೊಳಗೆ ಬರುವ ಅನೇಕ ಕಥೆ, ಉಪಕಥೆಗಳು ಬೇರೆಯೇ ಆದ ವಸ್ತು, ಕಥೆ, ನಿರೂಪಣಾ ಕ್ರಮವಿರುವುದನ್ನು ಕಾಣಬಹುದು. ಶಿವಪಾದನು ಹೇಳುವ ಕಥೆಗಳು, ಗೌರಿಯು ಶಿವಾಪುರಕ್ಕೆ ಯಾತ್ರೆ ಹೋಗುವಾಗ ಹೇಳುವ ಎಂಟು ಕಥೆಗಳು, ಗೌರಿಯು ಶಿವಾಪುರಕ್ಕೆ ಯಾತ್ರೆ, ಹೋಗುವಾಗ ಹೇಳುವ ಎಂಟು ಕಥೆಗಳ ಸ್ವರೂಪವು ಕೂಡಾ ಒಂದೇ ಆಗಿದೆ. ಆದರೆ ಅದನ್ನು ಹೇಳುವ ಕ್ರಮವು ಬೇರೆ ಬೇರೆಯಾಗಿದೆ. 'ಗುಣದಮ್ಮ'ನ ಮೂಲಕ ಹೇಳುವ ಈ ಕಥೆಗಳ ಅದ್ಭುತ ಶಕ್ತಿಯಿರುವುದು ಅದು ಬಳಸುವ ಜಾನಪದ ಮತ್ತು ಮಹದೇಶ್ವರ ಕಾವ್ಯದ ಕಥನ ಕ್ರಮದಲ್ಲಿ. ಇಂತಹ ಎಂಟು ಕಥೆಗಳು ಈ ಕೃತಿಯಲ್ಲಿನ ತಾಯಿ ಮೌಲ್ಯಗಳ, ಸಂಸ್ಕೃತಿಯನ್ನು ಪೋಷಿಸುವ ಪೂರಕವಾಗಿಯೇ ಇರುವುದನ್ನು ಕಾಣಬಹುದು. ಇಲ್ಲಿನ ಕಥೆಗಳೆಲ್ಲವು ಕೂಡಾ ಪುರಾಣದವುಗಳಾದರೂ ಕಥೆಹೇಳುವ ಕ್ರಮದಲ್ಲಿಯೇ ಅದನ್ನು ವರ್ತಮಾನಕ್ಕೆ ಒಗ್ಗಿಸಿಕೊಳ್ಳಲಾಗಿದೆ. ಇಂತಹ ನಿರೂಪಣೆಯಿಂದಲೇ ಕಂಬಾರರು ತಮ್ಮ ಮೂಲ ಸೆಲೆಯಾದ ಜಾನಪದ ಸತ್ವ, ನಿರೂಪಣೆಗಳಿಂದ ಪ್ರೇರಣೆ ಪಡೆದಿರುವುದು.

ಶಿಖರಸೂರ್ಯದ ನಿರೂಪಣೆಯಲ್ಲಿ ಮುಖ್ಯವಾಗಿ ಇತಿಹಾಸಕಾರರನ್ನು ಉಪಯೋಗಿಸಿಕೊಂಡಿರುವುದೇ ಒಂದು ವಿಶಿಷ್ಠ ಕ್ರಮವಾಗಿದೆ. ಏಕೆಂದರೆ ಇಂತಹ ನಿರೂಪಣೆಯಿಂದ ಹೆಚ್ಚು ವಸ್ತುನಿಷ್ಠವಾಗಿ ಹೇಳಲು ಸಾಧ್ಯವಾಗುವುದು. ಜೊತೆಗೆ ಚರಿತ್ರೆ, ಪುರಾಣ, ಐತಿಹ್ಯಗಳು, ನಂಬಿಕೆಗಳ ಮೂಲಕವು ಕಥೆಯು ಸಾಗುತ್ತಿದೆ. ಇಂತಹ ಬಿಡಿ ಬಿಡಿ ಘಟಕಗಳ ನಡುವೆ ಬೆಸುಗೆ ಏರ್ಪಡಿಸುವ ಒಂದು ಕೊಂಡಿಯಾಗಿಯೂ ಇಲ್ಲಿನ ಇತಿಹಾಸಕಾರರನ್ನು ಬಳಸಿಕೊಂಡಿರುವುದು ತಂತ್ರವು ಆಗಿದೆ. ಚಕೋರಿಯಲ್ಲಿ ಕನಸುಗಳು ಕಥೆ ಹೇಳುತ್ತಾ ಹೋದಂತೆ ಚಂದಮುತ್ತನ ಪರವಾಗಿಸುವ ಹಾಗೆ ಅವನ ದುಃಖಕ್ಕೆ ನೋವಿಗೆ ಭಾಗಿಗಳಾಗುತ್ತಾರೆ. ಇಲ್ಲಿಯೂ ಕೂಡಾ ಇತಿಹಾಸಕಾರರು ಶಿಖರಸೂರ್ಯನ ವ್ಯಕ್ತಿತ್ವ, ಮಹತ್ವಾಂಕ್ಷೆಯನ್ನು, ಅಧಿಕಾರ ವ್ಯಾಮೋಹದಿಂದ ಗೌರಿಗೆ ವಿಷವುಣಿಸಿದಾಗ ಶಿಖರಸೂರ್ಯನನ್ನು ಜರಿಯುತ್ತಾರೆ. ನಿನ್ನಡಿಯ ಪರವಾಗಿ ಮೃದು ಧೋರಣೆಯನು ಹೊಂದುತ್ತಾರೆ. ಈ ನಿರೂಪಣೆಯಿಂದಲೇ ಯಾವ ಸಂಸ್ಕೃತಿ ಹೆಚ್ಚು ಸೂಕ್ತವಾದದ್ದು ಎಂದು ತಿಳಿಯುತ್ತದೆ.

ಚಕೋರಿ ಮತ್ತು ಶಿಖರಸೂರ್ಯದ ನಿರೂಪಣಾ ತಂತ್ರಗಳು ನವ್ಯೋತ್ತರ ಕಾಲಘಟ್ಟದಲ್ಲಿ ಬಂದಿರುವುದು ಕುತೂಹಲವೆನಿಸುತ್ತದೆ. ಏಕೆಂದರೆ ನವ್ಯದ ಸಂದರ್ಭದಲ್ಲಿ ಬರೆಯಲಾರಂಭಿಸಿದ ಕಂಬಾರರಿಗೆ ನವ್ಯದ ನಿರೂಪಣಾ ತಂತ್ರಗಳು, ಕ್ರಮಗಳು, ಹೆಚ್ಚು ಸೂಕ್ತವೆನಿಸಲಿಲ್ಲವೇನೋ ಈ ಕಾರಣಕ್ಕಾಗಿಯೇ ತಮ್ಮ ಕೃತಿಗಳಲ್ಲಿ ವ್ಯಕ್ತಿ, ಕನಸು, ಹದ್ದು, ಇತಿಹಾಸಕಾರರನ್ನು ಬಳಸಿಕೊಂಡು ನಿರೂಪಿಸುವ ಕ್ರಮವಿದೆ. ಇದರ ಮೂಲಕವೇ ಆದಿಮದ ಕಥೆಯನ್ನು ಕಾಲ್ಪನಿಕ ಸಾಂಕೇತಿಕ ವಿವರಗಳನ್ನು ಹೆಚ್ಚು ಶಕ್ತಿಯುತವಾಗಿ ಬಳಸಲು ಸಾಧ್ಯವಾಗಿರುವುದು. ಚಕೋರಿಯೇ ಮಹಾಕಾವ್ಯ ಎನ್ನುವುದನ್ನು ಅದರ ನಿರೂಪಣೆಯ ಕ್ರಮ ಕೂಡಾ ಒಪ್ಪುವುದಿಲ್ಲ. ಆದರೆ ಶಿಖರಸೂರ್ಯನು ಅತಂಹ ಶಕ್ತಿಯನ್ನು ಹೊಂದಿದೆ ಎಂದು ಹೇಳಬಹುದು. ಇಲ್ಲಿನ ಅನುಭವ ಸಾಧ್ಯತೆಗಳು, ವೈವಿಧ್ಯಮಯ ನುಡಿಗಟ್ಟುಗಳು, ಗಾದೆಗಳು, ಘಟನೆಗಳು, ಏಕ ರೀತಿಯಲ್ಲಿಯೇ ಕಂಡುಬರುತ್ತದೆ. ಶಿಖರಸೂರ್ಯವು ಇತಿಹಾಸದ ಕಥಾನಕವಾದರೂ ಇಂತಹ ಚರಿತ್ರೆಯ ಕಥೆಯಲ್ಲಿಯೇ ಪುರಾಣಗಳು, ಯುದ್ಧ, ಹಾಡು, ಕುಣಿತಗಳು, ವಿದ್ಯೆ, ಸಂಗೀತ, ಅತಿಮಾನುಷ ವಸ್ತು ತಂತ್ರಗಳು, ಇಲ್ಲಿ ನಿರೂಪಣೆಯನ್ನು ಒಳಗೊಂಡಿದೆ. ಆದ್ದರಿಂದಲೇ ಇಲ್ಲಿನ ನಿರೂಪಣಾ ಕ್ರಮವು ಕೂಡಾ ಹಲವು ನಿರೂಪಣಾ ಕ್ರಮಗಳನ್ನು ಒಳಗೊಂಡಿರುವಂತದು ಮಹಾಕಾವ್ಯದ ನೆನಪನ್ನು ತರುತ್ತದೆ.

## ಕೊನೆಟಿಪ್ಪಣಿ

1. ಚಂದ್ರಶೇಖರ ಕಂಬಾರ, ಚಕೋರಿ, ಪುಟ-14.
2. ಅದೇ ಪುಟ - 117
3. ಅದೇ ಪುಟ - 125
4. ಅದೇ ಪುಟ - 107
5. ಅದೇ ಪುಟ - 71
6. ಲೇಖಕರ ಮಾತು
7. ಚಂದ್ರಶೇಖರ ಕಂಬಾರ, ಶಿಖರಸೂರ್ಯ, ಪುಟ-345.

# ತಳೆದ ನಿಲುವುಗಳು

ಕಂಬಾರರ ಚಕೋರಿ ಮತ್ತು ಶಿಖರಸೂರ್ಯದ ಕೃತಿಗಳಲ್ಲಿನ ಭಿನ್ನ ನೆಲೆಗಳ ವಿಶ್ಲೇಷಣೆಯಿಂದ ಸಾಹಿತ್ಯದ ಪ್ರಕಾರ ಹೀಗೆ ಹಿಗ್ಗುವ ಮತ್ತು ಬೇರೆ ರೂಪಗಳನ್ನು ಪಡೆದುಕೊಳ್ಳುತ್ತಲೇ ಎಲ್ಲಾ ಕಾವ್ಯ ಕೂಡಾ ಬೇಕಾಗುವ ಮಾನವೀಯ ಮೌಲ್ಯಗಳು ಪುರಾಣಗಳನ್ನು ಹೇಗೆ ವರ್ತಮಾನದಲ್ಲಿ ಮುಖ್ಯವಾಗುತ್ತದೆ ಎಂಬುದನ್ನು ಅರಿಯಬಹುದಾಗಿದೆ. ತಮ್ಮ ಇದುವರೆಗಿನ ಸಾಹಿತ್ಯದ ಮುಖ್ಯ ಕೇಂದ್ರವಾದ ಶಿವಾಪುರ ಮತ್ತು ಅದರ ಮೌಲ್ಯಜಗತ್ತುಗಳಿಗೆ ಪರ್ಯಾಯವಾದ ಜಗತ್ತು ಶಿಖರ ಸೂರ್ಯದಲ್ಲಿ ನಿರ್ಮಾಣಗೊಂಡಿರುವುದನ್ನು ಕಾಣಬಹುದು. ಇಂತಹ ಜಗತ್ತನ್ನು ಸಮರ್ಥವಾಗಿ ಎದುರಿಸುವ ಉಳಿಯುವ ಗುಣವಿರುವುದು ಕೂಡಾ ಶಿವಾಪುರಕ್ಕೆ ಎಂಬುದನ್ನು ಈ ಕಾದಂಬರಿಗಳು ನಿರೂಪಿಸುತ್ತವೆ. 'ಕಂಬಾರರು ತಾವು ಇದುವರೆಗೂ ಕಂಡುಕೊಂಡಿರುವ ದರ್ಶನಕ್ಕಿಂತ ಇನ್ನೊಂದು ಮುಖ್ಯವಾದ ನೆಲೆಯೊಂದನ್ನು ಈ ಕೃತಿಗಳ ಮೂಲಕವೇ ಹೇಳಹೊರಟಿದ್ದಾರೆ. ದೇಶಿಯ ನೆಲೆಗಳು ಪರಂಪರೆಗಳ ಬಗ್ಗೆ ಇರುವ ನಂಬಿಕೆಯು ತನ್ನ ಒಳಗಿನ ಶಕ್ತಿಗಳಿಂದ ಮತ್ತು ಬಾಹ್ಯಶಕ್ತಿಗಳಿಂದ ನಾಶವಾಗುವುದು ಕಂಬಾರ ಸಾಹಿತ್ಯವನ್ನು ಒಟ್ಟು ನಿಲುವು ಕೂಡಾ ಆಗಿದೆ.' ಇದನ್ನು 'ಕರಿಮಾಯಿ' ಕಾದಂಬರಿ 'ಹೇಳುತ್ತೇನ ಕೇಳಾ' ದಲ್ಲೂ ಕೂಡಾ ಕಾಣಬಹುದು. ಆದರೆ ಹಾಗೇ ನಾಶಗೊಂಡಗಲೂ ಮತ್ತೆ ಯಾವುದೋ ಒಂದು ಲೌಕಿಕ ಶಕ್ತಿಯಿಂದ ಜೀವಂತಿಕೆಯನ್ನು, ಚೈತನ್ಯವನ್ನು ಉಳಿಸಿಕೊಂಡು ತನ್ನನ್ನು ತಾನು ಪುನರ್ ಕಟ್ಟಿಕೊಳ್ಳುತ್ತದೆ ಎಂಬುದನ್ನು ಈ ಎರಡು ಕೃತಿಗಳಮೂಲಕ ಕಾಣಬಹುದು. ಒಟ್ಟು ಇದುವರೆಗಿನ ಈ ಅಧ್ಯಯನದಲ್ಲಿ ಮಾಡಲಾದ ಚರ್ಚೆಯ ಮುಖ್ಯ ನೆಲೆಗಳನ್ನು ಹೀಗೆ ಸಂಗ್ರಹಿಸಬಹುದು.

'ಕಂಬಾರರು ಸೃಷ್ಟಿಸಿದ ಸಾಹಿತ್ಯ ಜಗತ್ತು ಮುಖ್ಯವಾಗಿ ಮನುಷ್ಯ ಸಂಬಂಧದ ಮುಖ್ಯ ನೆಲೆಗಳು, ದೇಸೀಯ ಮೌಲ್ಯಗಳ ಉಳಿಸುವಿಕೆಯಲ್ಲಿನ ಅಗತ್ಯತೆ, ನಾಗರೀಕ, ಆಧುನಿಕತೆಯು ಛಿದ್ರಕರಣಕ್ಕೆ ಕಾರಣವಾಗುವ ಸಂಗತಿಗಳು, ಪುರಾಣಗಳು, ಮಿಥ್‌ಗಳ ಪುನರ್‌ರೂಪಿಸುವ ಅಗತ್ಯತೆಯನ್ನು ಇದರ ಕೃತಿಗಳಲ್ಲಿ ಹಿಡಿದಿಟ್ಟಿದ್ದಾರೆ.' ಇಂತಹ ದೇಸೀಯ ಮೂಲಗಳನ್ನು ಬಳಸಿಕೊಳ್ಳುವುದರ ಹಿಂದೆಯೇ ಕಂಬಾರರು ನಾವು ಯಾವುದನ್ನು ವಸಾಹತುಶಾಹಿಯ ಶಕ್ತಿ ಎಲ್ಲವನ್ನು ನಾಶಗೊಳಿಸುತ್ತಿದೆ ಎಂದು ಭಾವಿಸಿದ್ದೇವೋ ಅಂತಹ ನಂಬಿಕೆಯ ನೆಲೆಯನ್ನೇ ಈ ಎರಡೂ ಕೃತಿಗಳೂ ಹುಸಿಮಾಡುತ್ತವೆ. ವಸಾಹತುಶಾಹಿಯು ತರುವ ಆಧುನಿಕತೆ,

ವಿಜ್ಞಾನ, ನಾಗರೀಕ ಜಗತ್ತು, ಹೊಸ ಬಗೆಯ ಜ್ಞಾನಮೂಲಗಳು ಇವುಗಳ ಬಗ್ಗೆ ನವ್ಯದ ಸಂದರ್ಭದ ಲೇಖಕರ ಮುಖ್ಯ ಚರ್ಚೆಯ ವಿಷಯವಾದರೆ, ಕಂಬಾರರಿಗೆ ಇದ್ಯಾವುದೂ ಕೂಡಾ ಇವರಸಾಹಿತ್ಯಿಕ ನಿಲುವುಗಳನ್ನು ತಡೆಯಲಾಗದು. ಅವರು ಸೃಷ್ಟಿಸಿದ ಶಿವಾಪುರದ ರೂಪಕವೇ ವಸಾಹುತಶಾಹಿ ಶಕ್ತಿಯ ಎದುರು ಸಮರ್ಥವಾಗಿ ಉಳಿಯಬಲ್ಲ ಶಕ್ತಿಯಾಗಿದೆ. ಈ ರೀತಿ ಉಳಿಯುವಿಕೆಯಲ್ಲಿಯೇ ಕಂಬಾರರು ತಾವು ಆಯ್ಕೆ ಮಾಡಿಕೊಳ್ಳುವುದು ಪುರಾಣಗಳು, ಮಿಥ್‌ಗಳು, ಇಂತಹವುಗಳ ಮೂಲಕವೇ ಇವುಗಳು ನಿರಂತರವಾಗಿ ಹೊಸ ರೂಪ ಶಕ್ತಿಗಳನ್ನು ಇವು ಪಡೆಯಬಲ್ಲವು. ಜಾನಪದ ಕಥನ ತಂತ್ರಗಳು ವಸ್ತುವೈವಿಧ್ಯತೆ ಇವುಗಳು ಮೂಲಕ ವರ್ತಮಾನದ ಸಂದರ್ಭದ ಬಿಕ್ಕಟ್ಟುಗಳಿಗೆ ಭೂತದ ಕಡೆಗೆ ಮುಖ ಮಾಡುವ ಮುಖ್ಯ ನೆಲೆಯನ್ನು ಕೂಡಾ ಕಾಣಬಹುದು. ಇವರ ಕಾದಂಬರಿಗಳು ಮಂಡಿಸುವ ಕಥನಕ್ರಮದಲ್ಲಿಯೇ ಇಂತಹ ನಿಲುವುಗಳು ಇರುವುದನ್ನು ಕಾಣಬಹುದು. ಆದ್ದರಿಂದ ಕಂಬಾರರಿಗೆ ವರ್ತಮಾನಕ್ಕೆ ಕಾರಣವಾಗಿರುವ ಅನೇಕ ಬಿಕ್ಕಟ್ಟುಗಳಿಗೆ ಭೂತದಲ್ಲಿ ಉತ್ತರಗಳನ್ನು ಕಂಡುಕೊಳ್ಳಬೇಕಾದ ಅಗತ್ಯತೆಯನ್ನು ಒತ್ತಿಹೇಳುತ್ತಾರೆ. ಈ ಕಾರಣದಿಂದಲೇ ಇವರ ಕಥನ ಕ್ರಮ ಭೂತ-ವರ್ತಮಾನ-ಭವಿಷ್ಯತ್‌ಗಳನ್ನು ಒಳಗೊಳ್ಳುವ ಆಕಾಶ-ಭೂಮಿಯ ನಡುವೆ ಅಂತರವಿಲ್ಲದೇ ಇರುವುದನ್ನುಕಾಣಬಹುದು. ಇಂತಹ ಕ್ರಮದ ಮೂಲಕವೇ ಎಲ್ಲವನ್ನು ಕೃತಕವಾಗಿ ವಿಂಗಡಿಸುವ ಛಿದ್ರಗೊಳಿಸುವುದನ್ನು ಕಂಬಾರರು ವಿರೋಧಿಸುವಿಕೆಯನ್ನು ಕಾಣಬಹುದು.

ವಸಾಹತುಶಾಹಿಯ ವ್ಯವಸ್ಥೆ ನಿರ್ಗಮನದ ನಂತರದ ಸಂದರ್ಭದಲ್ಲಿ ಅದು ಉಂಟುಮಾಡಿದ ಮೌಲ್ಯಗಳಿಂದ ಬಿಡುಗಡೆ ಪಡೆಯಲು ಹಂಬಲಿಸುವ ಅನೇಕ ಸಾಹಿತ್ಯಿಕ ಕೃತಿಗಳನ್ನು ಕಾಣಬಹುದು. ಕಂಬಾರರು ಸಾಹಿತ್ಯಕ ನಿಲುವು ಕೂಡಾ ಇಂತಹದ್ದೇ ಆಗಿದೆ. ಅವರ ಈ ಎರಡು ಕೃತಿಗಳ ತಾತ್ವಿಕ ಜಗತ್ತು ಹೊಂದಿರುವ ನೆಲೆಯಲ್ಲಿಯೇ ಇಂತಹ ಹಂಬಲವಿರುವುದನ್ನು ಕಾಣಬಹುದು. ಆಧುನಿಕತೆ, ಪ್ರಭುತ್ವ, ನಾಗರಿಕ ಜಗತ್ತಿನ ಎದುರು ಅತ್ಯಂತ ಶಕ್ತಿಶಾಲಿಯಾಗಿ ಉಳಿಯಬಲ್ಲ ಶಿವಾಪುರದ ನಿರ್ಮಾಣವೇ ಇಂತಹ ಒಂದು ಹಂಬಲವನ್ನು ಸೂಚಿಸುತ್ತದೆ. ಕಂಬಾರರಿಗೆ ಇಂತಹ ಜಗತ್ತು ಪುರಾತನವಾದದ್ದಲ್ಲ. ನಾವು ಉಳಿಸಿಕೊಳ್ಳಲೇ ಬೇಕಾದ ನೆಲೆಯಾಗಬೇಕಾಗಿರುವುದನ್ನು ಹೇಳುತ್ತದೆ. ಆದರೆ ದುರಂತವೆಂದರೆ ಅಂತಹ ನೆಲೆ ಇವತ್ತಿನ ಸಂದರ್ಭದಲ್ಲಿ ಸಾಧ್ಯವಾಗದೇ ಇರುವುದು. ಏಕೆಂದರೆ ನಾವೆಲ್ಲರೂ ಕೂಡಾ ಕನಕಪುರಿಯ ಮೌಲ್ಯಗಳನ್ನೇ ಪೋಷಿಸುವ, ಅದರ ಭಾಗವಾಗಿ ಭ್ರಷ್ಟಗೊಂಡವರೇ ಆಗಿಹೋಗಿದ್ದೇವೆ. ಆದರೆ ಕೊನೆಯಲ್ಲಿ ಉಳಿಯುಬಲ್ಲ

ಶಕ್ತಿಯಾಗಿರುವುದು ಕೂಡಾ ಈ ಜಗತ್ತಲ್ಲ. ಈ ಮೂಲಕ ಆಧುನಿಕತೆಯ ಸಾಗುವಿಕೆಯು ಅಂತಿಮವಾಗಿ ದುರಂತ. ನಾಶದ ಕಡೆಗೆ ಎನ್ನುವ ನಿಲುವು ಈ ಅಧ್ಯಯನದಲ್ಲಿ ಕಂಡುಕೊಂಡ ನೆಲೆಯಾಗಿದೆ. ಮತ್ತು ಉಳಿಯಬಲ್ಲ ಶಕ್ತಿಯಾಗಿರುವ ಶಿವಾಪುರದಿಂದ ನಾವೆಲ್ಲ ದೂರ ಸರಿದಿರುವುದರ ದುರಂತತೆಯು ಇದೆ. ಮತ್ತು ಇದನ್ನು ಒಪ್ಪಿಕೊಳ್ಳಲಾಗದ ಸ್ಥಿತಿಯು ಉಂಟಾಗಿದೆ. ಉಳಿಯಬಲ್ಲವಾಗಿರುವ ಶಿವಾಪುರದ ಮೌಲ್ಯಗಳ ಜಗತ್ತು ಕೂಡಾ ಛಿದ್ರಗೊಳ್ಳುತ್ತಿರುವ ಸಂಗತಿಯನ್ನು ಕೂಡಾ ಕಾಣಬಹುದು. ಪರಂಪರೆಯನ್ನು ಒಪ್ಪಿಕೊಂಡ ಪಕ್ಷವೇ ಅದರೊಳಗಿನ ಕ್ರೂರ ಸಂಗತಿಗಳನ್ನು ಒಪ್ಪಿಕೊಳ್ಳಬೇಕಾಗುತ್ತದೆ. ಆದರೆ ಕಂಬಾರರ ಈ ಎರಡು ಕೃತಿಗಳಲ್ಲಿರುವ ಶಿವಾಪುರದ ಪರಂಪರೆಯಲ್ಲಿ ಕ್ರೂರತೆಯು ಇಲ್ಲದಿರುವುದನ್ನು ಕಾಣಬಹುದು. ವಿದ್ಯೆಯನ್ನು ಎಲ್ಲರಿಗೂ ನೀಡುವ ಆದರಿಂದ ಪಡೆದುಕೊಳ್ಳುವ ಸಿದ್ದಿಗಳೇ ಅವರನ್ನು ಹೇಗೆ ರೂಪಿಸಿವೆ ಎಂಬುದನ್ನು ಕೂಡಾ ಈ ಅಧ್ಯಯನದಲ್ಲಿ ಕಂಡುಕೊಂಡ ಮುಖ್ಯ ಸಂಗತಿಯಾಗಿದೆ.

ಕನ್ನಡದ ವಿಶಿಷ್ಟ ಕವಿಯಾಗಿರುವ ಕಂಬಾರರು ಮತ್ತೆ ಮತ್ತೆ ಮಿಥ್‌ಗಳನ್ನು, ಅನಾಧುನಿಕ ಜಗತ್ತನ್ನು ವರ್ತಮಾನದಲ್ಲಿ ಸೃಷ್ಟಿಸುವ ಸಂದರ್ಭದಲ್ಲಿ ಅದು ಪುನರ್ ರೂಪಕ್ಕೆ ಒಳಗಾಗುತ್ತಲೇ ಇರುತ್ತದೆ. ಹೀಗೆ ಒಳಗಾದ ಸಂದರ್ಭದಲ್ಲಿ ಅವುಗಳು ಪಡೆಯುವ ಬೇರೆ ಬೇರೆ ರೂಪಗಳು ನಮ್ಮನ್ನು ಹೆಚ್ಚು ಮಾನವೀಯ ಮತ್ತು ದುರಂತತೆಯ ಕಡೆಗೆ ಕೊಂಡೊಯ್ಯುತ್ತದೆ. ಹೆಚ್ಚು ಮಾನವೀಯತೆಯ ಕಡೆಗೆ ಹೋಗಲು ಕಾರಣವೆಂದರೆ ಅಂತಹ ಮೌಲ್ಯಗಳು ಇವತ್ತಿನ ಸಂದರ್ಭದಲ್ಲಿ ಮುಖ್ಯವಾಗುತ್ತವೆ. ಮತ್ತು ಕತೆಯು ಮೂಲಕವೇ ಮನುಷ್ಯ ಪಡೆದುಕೊಳ್ಳಬೇಕಾದ ಸಾರ್ಥಕತೆಯನ್ನು ಚಂದಮುತ್ತನಂತಹವರ ಸಾವು ನಮಗೆ ಮಾರ್ಗದರ್ಶಕವಾಗದಬಲ್ಲದು. ಆದರೆ ವಿದ್ಯೆಯ ಮೂಲಕ ಪಡೆಯುತ್ತಿರುವ ಬುದ್ಧಿ ಇದರಿಂದ ಎಲ್ಲಾವನ್ನು ಪಡೆಯಬೇಕೆಂಬ ಹಂಬಲ, ಮಹತ್ವಾಕಾಂಕ್ಷೆ ಗೆದ್ದಷ್ಟು ಸೋಲುವ ಶಿಖರಸೂರ್ಯನಂತವರು ನಮಗೆ ಬೇಕಾಗಿದೆಯೇ ? ಎಂಬುದನ್ನು ಕೂಡಾ ಈಅಧ್ಯಯನದ ಚರ್ಚೆಯು ಒಳಗೊಂಡಿವೆ. ಆದರೆ ಇವತ್ತಿನ ಸಂದರ್ಭದಲ್ಲಿ ಶಿಖರಸೂರ್ಯನಾಗುವ ಕೀರ್ತಿ, ಗೆಲುವು, ಅಧಿಕಾರಕ್ಕೋಸ್ಕರ ಏನನ್ನು ಮಾಡಲು ಸಿದ್ಧರಿರುವ ಜಗತ್ತು ಇದಾಗಿರುವುದನ್ನು ಕಾಣಬಹುದು. ಅಧಿಕಾರ, ಗೆಲುವು, ಸಾಮರ್ಥ್ಯಗಳು ಎದುರು ಉಳಿಯಬಲ್ಲ, ಇದನ್ನು ಪ್ರತಿಭಟಿಸುವ ಮತ್ತೊಂದು ಮುಖ್ಯ ಅಂಶ ಎಂದರೆ ಹೆಣ್ಣು. ಕಂಬಾರರು ಸೃಷ್ಟಿಸಿದ ಹೆಣ್ಣಿನ ಪಾತ್ರಗಳೇ ಅಂತಹ ಮನೋಬಲ, ಇಚ್ಛಾಬಲಗಳಿರುವುದನ್ನು ಕಾಣಬಹುದು. ಸ್ತ್ರೀವಾದದ ವ್ಯಾಖ್ಯಾನಗಳಿಗೆ ಸಿಗದ, ವಿಶ್ಲೇಷಿಸಲು ಸಾಧ್ಯವೆನಿಸಿದರೂ

ಸುಲಭವಲ್ಲದ ಸ್ತ್ರೀ ಪಾತ್ರಗಳು ಈ ಎರಡು ಕೃತಿಗಳಲ್ಲಿವೆ. ಗಂಡಸು ಇಲ್ಲದೆ ಬದುಕನ್ನು ರೂಪಿಸಿ, ಪೋಷಿಸಿದ ಗಂಡಸಿನ ಅಹಂಕಾರದ ನೆಲೆಯನ್ನು ಸಮರ್ಥವಾಗಿ ಪ್ರತಿಭಟಿಸಿದ, ರಾಜ್ಯಾಧಿಕಾರವನ್ನು ಕುತಂತ್ರದ ಮೂಲಕವಾದರೂ ಉಳಿಸಿಕೊಳ್ಳಬಲ್ಲ ಹೆಣ್ಣುಗಳು ತಮ್ಮದೇ ಆದ ಸ್ವಂತಿಕೆ ಹೊಂದಿರುವುದನ್ನು ಕಾಣಬಹುದು. ಎರಡುಕೃತಿಗಳಲ್ಲಿನ ಸ್ತ್ರೀ ಪಾತ್ರಗಳು ಕೂಡಾ ಪುರುಷನ ನೆಲೆಯನ್ನು ವಿರೋಧಿಸುವ ಅಂಶಗಳಿರುವುದನ್ನು ಈ ಅಧ್ಯಯನ ವು ಕಂಡುಕೊಂಡಿದೆ. ಇದರ ಮೂಲಕವೇ ಗಂಡಸಿನ ಅಹಂಕಾರವನ್ನು ಪುರುಷಾಧಿಕಾರವನ್ನು ವಿರೋಧಿಸುವ ನೆಲೆಗಳು ಇವೆ.

ಕೊನೆಯದಾಗಿ ಕಂಬಾರರು ಈ ಎರಡು ಕೃತಿಗಳಲ್ಲಿ ಬಳಸಲಾಗಿರುವ ವಸ್ತು, ಪಾತ್ರಗಳು, ಕಥನಕ್ರಮ, ನಿರೂಪಣಾ ತಂತ್ರಗಳು, ಕನ್ನಡ ಸಾಹಿತ್ಯದಲ್ಲಿ ಹೊಸತಾಗಿರುವಂತವು. ಅದರಲ್ಲೂ ಕೂಡಾ ನಿರೂಪಣಾ ತಂತ್ರಗಳಲ್ಲಿ ಕನಸು ಮತ್ತು ಚರಿತ್ರೆಕಾರರ ಮೂಲಕವೇ ಕಥೆಯನ್ನು ನಿರೂಪಿಸುವ ಕ್ರಮ ತುಂಬಾ ಭಿನ್ನ ನೆಲೆಯಿಂದ ಕೂಡಿದೆ. ದೇವನೂರರ ಕುಸುಮಬಾಲೆಯನ್ನು ಬಿಟ್ಟರೆ ಕನ್ನಡದಲ್ಲಿ ಕನಸುಗಳೇ ಕಥೆ ಹೇಳುವ ಕ್ರಮವಿರುವುದು ಚಕೋರಿಯಲ್ಲಿಯೇ. ಈಗಾಗಲೇ ಜಾನಪದೀಯ ಜಗತ್ತಿನಿಂದ ಅಲಕ್ಷಿತ ಸಮುದಾಯ ಮಹಾಕಾವ್ಯಗಳ ಕಥನ ಮಾದರಿ, ನಿರೂಪಣಾ ತಂತ್ರವನ್ನು ಬಳಸಿಕೊಳ್ಳುತ್ತಲೇ ಹೊಸದಾದ ಸಾಹಿತ್ಯ ಪ್ರಕಾರವೊಂದನ್ನು ಕೂಡಾ ಕಂಬಾರರು ಸೃಷ್ಟಿಮಾಡಿದ್ದಾರೆ. ಎಲ್ಲವನ್ನು ಕೃತಕವಾಗಿ ವರ್ಗೀಕರಣ ಮಾಡಿ ನೋಡುವ ಆಧುನಿಕ ಸಾಹಿತ್ಯದ ಮತ್ತು ವಸಾಹತುಶಾಹಿಯ ನಿಲುವನ್ನು ಕೂಡಾ ಈ ಎರಡು ಕೃತಿಗಳುಮೀರಿವೆ. ಮಹಾಕಾವ್ಯದ ಎಲ್ಲಾ ಲಕ್ಷಣಗಳನ್ನು ಹೊಂದಿದ್ದಾಗಲೂ ಮಹಾಕಾವ್ಯದ ತೀರಾ ಗಾಂಭೀರ್ಯತೆಯ ಸೋಂಕು ಇಲ್ಲದಿರುವುದನ್ನು ಕಾಣುತ್ತೇವೆ. ಕಂಬಾರರು ಸೃಷ್ಟಿಸಿದ ಶಿವಾಪುರದ ಮೌಲ್ಯಗಳು ಉಳಿಯುವ ಮತ್ತು ನಿರಂತರವಾಗಿ ಬದಲಾಗುವ ಇಂತಹ ಶಿವಾಪುರವು ಕೂಡಾ ಬದಲಾಗುವ ಸಂಗತಿಯನ್ನು ಕೂಡಾ ಕಾಣಬಹುದು. ಕಂಬಾರರ ಇಂತಹ ದರ್ಶನವು ಹೆಚ್ಚು ಮುಖ್ಯ ಎಂದು ಈ ಅಧ್ಯಯನದ ನಂಬಿಕೆ.

# ಗ್ರಂಥಸೂಚಿ

## ಮೂಲ ಪಠ್ಯಗಳು


1. ಡಾ. ಚಂದ್ರಶೇಖರ ಕಂಬಾರ : ಚಕೋರಿ, ಅಕ್ಷರ ಪ್ರಕಾಶನ, ಹೆಗ್ಗೋಡು, ಸಾಗರ, ಪ್ರ. ಮುದ್ರಣ : 1996.
2. ಡಾ. ಚಂದ್ರಶೇಖರ ಕಂಬಾರ : ಶಿಖರಸೂರ್ಯ, ಅಕ್ಷರ ಪ್ರಕಾಶನ, ಹೆಗ್ಗೋಡು, ಸಾಗರ, ಪ್ರ. ಮುದ್ರಣ : 2006.


## ಆಕರ ಗ್ರಂಥಗಳು


1. ಡಾ. ಚಂದ್ರಶೇಖರ ಕಂಬಾರ : ಕರಿಮಾಯಿ, ಅಕ್ಷರ ಪ್ರಕಾಶನ, ಹೆಗ್ಗೋಡು, ಸಾಗರ, ಮೂರನೇ ಮುದ್ರಣ : 1995.
2. ಕನ್ನಡ ಪುಸ್ತಕ ಪ್ರಾಧಿಕಾರ : ನೆಲಸಂಪಿಗೆ, (ಸಮಗ್ರ ನಾಟಕಗಳು) ಪಂಪಮಹಾಕವಿ ರಸ್ತೆ, ಚಾಮರಾಜಪೇಟೆ, ಬೆಂಗಳೂರು. 2004.
3. ಡಾ. ಚಂದ್ರಶೇಖರ ಕಂಬಾರ : ಸಿಂಗಾರವ್ವ ಮತ್ತು ಅರಮನೆ, ಪ್ರಿಂಟರ್ಸ್ ಪ್ರಕಾಶನ, ನಂ. 16, ಮಹಾತ್ಮ ಗಾಂಧಿ ರಸ್ತೆ, ಬೆಂಗಳೂರು. 1982.
4. ಡಾ. ಬಸವರಾಜ ಮಾಲಶೆಟ್ಟಿ : ಡಾ. ಚಂದ್ರಶೇಖರ ಕಂಬಾರ, ನವಕರ್ನಾಟಕ ಪ್ರಕಾಶನ, ಎಂಬಿಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು. ದ್ವಿ. ಮುದ್ರಣ. 2006.
5. ಡಾ. ಕೆ.ಸಿ. ಶಿವಾರೆಡ್ಡಿ (ಸಂ.) : ಚಕೋರಿ ಒಂದು ಅಧ್ಯಯನ, ಸಿ.ವಿ.ಜಿ. ಪಬ್ಲಿಕೇಶನ್, ಬೆಂಗಳೂರು, ಪ್ರ. ಮುದ್ರಣ : 1998.
6. ಹೆಚ್.ಎಸ್. ಶಿವಪ್ರಕಾಶ್ (ಸಂ.): ಸಿರಿಸಂಪಿಗೆ ಕಂಬಾರ-60 (ಅಭಿನಂದನಾ ಗ್ರಂಥ), ರಂಗನಿರಂತರ, 18 ಬಿ ಮುಖ್ಯರಸ್ತೆ, 5ನೇ ಹಂತ, ರಾಜಾಜಿನಗರ, ಬೆಂಗಳೂರು. 1997.

7. ಡಾ. ಚಂದ್ರಶೇಖರ ಕಂಬಾರ : ಹೇಳುತೇನ ಕೇಳಾ, ಅಕ್ಷರ ಪ್ರಕಾಶನ, ಸಾಗರ, ಹೆಗ್ಗೋಡು, 1968.

8. ಡಾ. ನಟರಾಜ ಹುಳಿಯಾರ್ : ಆಫ್ರಿಕನ್ ಹಾಗೂ ಕನ್ನಡ ಸಾಹಿತ್ಯಗಳಲ್ಲಿ ಆಧುನಿಕತೆ ಮತ್ತು ಪರಂಪರೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, 2004.

9. ಡಾ. ಕೆ.ಸಿ. ಶಿವಾರೆಡ್ಡಿ : ಕನ್ನಡದ ಹಾಡು-ಪಾಡು, ಅಧ್ಯಯನ ಮಂಡಲ, ಆರ್.ವಿ. ರಸ್ತೆ, ಬಸವನಗುಡಿ, ಬೆಂಗಳೂರು. ಪ್ರ. ಮುದ್ರಣ 2003.

10. ಡಾ. ಜಯಪ್ರಕಾಶ್ ಮಾವಿನಕುಳಿ (ಸಂ.) : ಶಿವಾಪುರ ಕಂಬಾರ ನಮಸ್ಕಾರ ಚಂದ್ರಶೇಖರ ಕಂಬಾರರ ಅಭಿನಂದನಾ ಗ್ರಂಥ, ಮಾವಿನಕುಳಿ, ಮೂಡಬಿದ್ರೆ, ದ.ಕನ್ನಡ. ಪ್ರ. ಮುದ್ರಣ 2004.

11. ಕೆ.ಎನ್. ತಿಲಕ್‌ಕುಮಾರ್ (ಸಂ.): ಮಯೂರ (ತಿಂಗಳ ಪತ್ರಿಕೆ) ನಂ. 75, ಮಹಾತ್ಮ ಗಾಂಧಿ ರಸ್ತೆ, ಬೆಂಗಳೂರು, ಫೆಬ್ರುವರಿ 2008. ಸಂಪುಟ-1. ಸಂಚಿಕೆ-2

12. ವಿವಿಧ ಲೇಖಕರು : ವಸಾಹತುಶಾಹಿ ಅನುಭವ ಮತ್ತು ಕಂಬಾರರ ಸಾಹಿತ್ಯ, ಕರ್ನಾಟಕ ಸಾಹಿತ್ಯ ಅಕಾಡೆಮಿ, ನೃಪತುಂಗ ರಸ್ತೆ, ಬೆಂಗಳೂರು, ಪ್ರ. ಮುದ್ರಣ 1992.

13. ಗಿರಡ್ಡಿ ಗೋವಿಂದರಾಜು : ಕಾದಂಬರಿ : ವಸ್ತು ಮತ್ತು ತಂತ್ರ, ಬಾಪ್ಕೋ ಪ್ರಕಾಶನ, ಮೈಸೂರು ರಸ್ತೆ, ಬೆಂಗಳೂರು. ಪ್ರ.ಮುದ್ರಣ 1976

14. ಡಾ. ಚಂದ್ರಶೇಖರ ಕಂಬಾರ : ದೇಶೀಯ ಚಿಂತನೆ, ಅಂಕಿತ ಪ್ರಕಾಶನ, ನಂ. 53, ಶ್ಯಾಂಸಿಂಗ್ ಕಾಂಪ್ಲೆಕ್ಸ್, ಗಾಂಧಿಬಜಾರ್, ಬಸವನಗುಡಿ, ಬೆಂಗಳೂರು. ಪ್ರ.ಮುದ್ರಣ 2004.

15. ಚಂದ್ರಶೇಖರ ಕಂಬಾರರ ಸಂದರ್ಶನಗಳು, ಕನ್ನಡ ಟೈಮ್ಸ್ (ವಾರಪತ್ರಿಕೆ), ಸಂಪುಟ-1. ಸಂಚಿಕೆ-23,24,27. ಗ್ರಾಮಸ್ವರಾಜ್ಯ, 3ನೇ ಮುಖ್ಯರಸ್ತೆ, ಬಿ.ಇ.ಎಂ.ಎಲ್. ಲೇಔಟ್, ಬೆಂಗಳೂರು.